# ಅದ್ಭುತ್ ರಾಮಾಯಣಂ

ಎಂ. ಆ. ರಾಮಾನುಜಯ್ಯಂಗಾರ್ಯರಿಂದ

ಪರಿಷ್ಕರಿಸಲ್ಪಟ್ಟು ಟಿಪ್ಪಣಿ ಸಹಿತ

---

ತೃತೀಯ ಮುದ್ರಣ. ೧೫೦೦ ಪ್ರತಿಗಳು

ಮೈಸೂರು

ಕ್ರೌನ್ ಮತ್ತು ಕೆ. ಎನ್. ಎನ್. ಮುದ್ರಣಶಾಲೆಗಳಲ್ಲಿ ಮುದ್ರಿತವಾಗಿ

ಎಂ. ಆರ್. ನರಸಿಂಹಾಚಾರ್ ಬಿ. ಎ,

ಪ್ರೊಪ್ರೈಟರ್,

ಕರ್ಣಾಟಕ ಕಾವ್ಯಕಲಾನಿಧಿ, ಇವರಿಂದ

ಪ್ರಚಾರಿಸಲ್ಪಟ್ಟಿದೆ.

1923.

# ಅದ್ಭುತ ರಾಮಾಯಣದ ಕಥಾಸಂಗ್ರಹ.

---

ಮೊದಲು ಶ್ರೀರಾಮಜನ್ಮವೃತ್ತಾಂತವು; ಮತ್ತು ಶ್ರೀಮತೀಚರಿತವೂ, ಅನಂತರ ದಂಡಕಾರಣ್ಯವಾಸಿಗಳಾದ ಋಷಿಗಳ ರಕ್ತ, ನಾರದನ ಶಾಪ, ಲಕ್ಷ್ಮೀದೇವಿಯ ಅಪರಾಧ, ಇವುಗಳಿಂದ ಮಂಡೋದರಿಯ ಗರ್ಭದಲ್ಲಿ ವೈದೇಹಿಯು ಜನ್ಮಿಸಿದ ವೃತ್ತಾಂತವು; ಆಮೇಲೆ ಭಾರ್ಗವರಾಮನಿಗೆ ಶ್ರೀರಾಮನ ವಿಶ್ವರೂಪದರ್ಶನವು; ತದನಂತರ ಋಷ್ಯಮೂಕಪರ್ವತದಲ್ಲಿ ಭಿಕ್ಷುರೂಪವನ್ನು ತಾಳಿ ಬಂದ ಹನುಮಂತನ ಮೂಲಕ ಸುಗ್ರೀವನ ಸಖ್ಯವು; ಆಮೇಲೆ ಲಕ್ಷ್ಮಣನ ಶರೀರಜ ತಾಪದಿಂದ ಸಮುದ್ರಕ್ಕೆ ಶೋಷಣವು, ಬಳಿಕ ಪಟ್ಟಾಭಿಷಿಕ್ತನಾದ ಶ್ರೀರಾಮನು ಋಷಿಗಳ ಎದುರಿಗೆ ಸಹಸ್ರಕಂಠನಾದ ರಾವಣನ ಪ್ರತಾಪವನ್ನು ಸೀತೆಯಿಂದ ಕೇಳಿದವನಾಗಿ ಪರಿವಾರದೊಡನೆ ಸಭ್ರಾತೃಕನಾಗಿ, ಆ ಸಹಸ್ರಾಸ್ಯನಿಗೆ ವಾಸಸ್ಥಾನವಾದ ಪುಷ್ಕರದ್ವೀಪಕ್ಕೆ ತೆರಳುವುದು; ಆ ಬಳಿಕ ಅಲ್ಲಿ ರಾಮಸೇನೆಗೂ ಸಹಸ್ರಕಂಠನಸೇನೆಗೂ ಯುದ್ಧವು; ರಾಮನು ಪರಾಜಿತನಾಗಿ ಮೂರ್ಛೆಹೊಂದಲು; ಸೀತಾದೇವಿಯು ಮಹಾಕಾಳಿಯ ರೂಪವನ್ನು ಧರಿಸಿ, ಸಹಸ್ರಕಂಠನ ಸಂಹರಿಸುವುದು, ಆ ತರುವಾಯ ಪ್ರಸನ್ನಳಾಗಿ ಪೂರ್ವಸೌಮ್ಯರೂಪವನ್ನು ತಾಳಿದ ಸೀತೆಯೊಡಗೂಡಿ, ಶ್ರೀರಾಮನು ಪುನಃ ಅಯೋಧ್ಯಾಪುರಪ್ರವೇಶವಂ ಮಾಡುವುದು—ಎಂಬುದು ಈ ಗ್ರಂಥದ ಕಥಾಗರ್ಭ.

# ಅದ್ಭುತ ರಾಮಾಯಣದ ಅಧ್ಯಾಯ ವಿಷಯಸೂಚಿ.

———:o:———

# ಅದ್ಭುತರಾಮಾಯಣಂ.

## ಪ್ರಥಮಾಶ್ವಾಸಂ.

ಈತಿರೆಯೊಳ್ ಆವಗಂ ಕಳಿವಣ್ಗಳಿಂ ಕಣ್ಗೊಳಿಪ ಪಣ್ಮರಂಗಳಿಂ, ಪಗಲುಮಿರುಳುಮರಲ್ದು ಮಗಮಗಿಪ ನೀರ್ವೂಗಳಿಂದೆಸೆವ ಪೂಗೊಳಂಗಳಿಂ, ದಿಟ್ಟಿಸಿ ಮುಟ್ಟುವರಘಂಗಳಂ ಸುಟ್ಟುರಿಪ ತೀರ್ಥಂಗಳಿಂ, ಬಗೆವಗೆವಣ್ಣದಿನೊಪ್ಪುವಲರಂ ಪಿಡಿದ ಪೂವಳ್ಳಿಗಳಿಂ, ತಣ್ಣೆೞಲನೀವ ತೆಳ್ಮರಂಗಳಿಂ, ತಮ್ಮತ್ತಣಿಂ ಕಿಱುವೆಲರ್ ಸೋಂಕೆ ಕುತ್ತಮೆಲ್ಲಮನೞಿಯಿಪ ಮರ್ದುಗಿಡುಗಳಿಂ, ಪಗೆಯುಳಿದ ಮಿಗಬಳಗದಿಂ, ಇಂಚರಂಗೆಯ್ವ ಪಕ್ಕಿಗಳಿಕ್ಕೆಯಿಂ ತೋರ್ಪ ವಾಲ್ಮೀಕಿಮಹರ್ಷಿಗಳ ಮನೋಜ್ಞಂ ಪುಣ್ಯಾಶ್ರಮಮೊಂದು ತಮಸಾನದಿಯ ತೀರದೊಳ್ ಪೆಸರ್ವಡೆದಿರ್ಪುದು.

ಇಂತು ಮನಂಗೊಳ್ವ ತಾಣದ ರಿಸಿಗಳೊಳ್-ಆರೆಬರ್ ಒಂದೆಡೆಯೊಳ್ ಪೞವಾತಂ ನುಡಿಯುತೆ ಜನ್ನದಾರಮಂ ಪೊಸೆಯುತಿರ್ಪರ್; ಕೆಲರ್ ಗರವಟದ ಸನ್ನೆಯಮನಣಿಗೆಯ್ಯುತಿರ್ಪರ್ ; ಕೆಲರ್ ಸಂದಿಗ್ಧಾರ್ಥವೇದವಾಕ್ಯಂಗಳಂ ವಿಚಾರಿಸುತಿರ್ಪರ್ ; ವಟುಗಳೊಳರೆಬರ್-ಪೞತೊಂದೊಡೆಯೊಳ್ ಫಲಸಮಿತ್ಕುಶಂಗಳಂ ಕೊಯ್ಯುತಿರ್ಪರ್ ; ಆರೆಬರ್ ನಾರುಡೆಯಂ ನೀರೊಳೊಗೆಯುತಿರ್ಪರ್; ರಿಸಿವೆಣ್ಗಳೊಳ್ ಕೆಲರ್ ಮತ್ತಮೊಂದೆಡೆಯೊಳ್ಪಸರಮಂ ಪಿಡಿದು ರಾಮನಾಮಮನೆಣುತಿರ್ಪರ್ ; ಕೆಲರ್ ಹದಿಬದೆಯರ ನೆಗೞ್ತೆಯಂ, ಕೆಲರ್ ಪುಣ್ಯಕಥಾವಿಶೇಷಂಗಳಂ ಬೆಸಗೊಳುತಿರ್ಪರ್ ; ಪೂಗಿಡುಗಳ ಪಾತೆಗಳ್ಗೆ ನೀರ್ವೆಱೆಯುತುಮಿರ್ಪರ್ ಕೆಲರ್.

ಈಪರಿಯೊಳಿರುತಿರಲೊಂದುದಿನಮೆಂದಿನಂತೆ ಪುತ್ತಿನಣುಗಂ ತಮ್ಮ

ಶಿಷ್ಯರ್ಗೆ ರಾಮಾಯಣಕಥಾಕೌತುಕಮಂ ನಿರವಿಸುತಿರಲಾ ಶಿಷ್ಯರೊಳ ಗ್ಗಳನೊರ್ವಂ ಭಾರದ್ವಾಜಂ ಕೆಯ್ಮುಗಿದಿಂತು ಬೆಸಗೊಂಡಂ :—

ಜೀಯ, ತಾಮೆಮಗನುಗ್ರಹಿಸಿದ ರಾಮಚಾರಿತ್ರಮಂ ಕಿವಿಯೊಳೆ ಕೇಳ್ದೊಡಂ ಮನಮಾಱದುದಱಿಂ ಮಗುೞ್ದುಮದನೆ ಬಿತ್ತರಿಸಿ ಪೇೞ್ದಿದು. ಅಂತುಮಲ್ಲದೆ ಪಿಂತೊರ್ಮೆ ಬ್ರಹ್ಮಲೋಕದೊಳ್ ಶತಕೋಟಿರಾಮಾಣಂಗಳಿರ್ಪುವೆಂದುಮತ್ತಣಿನೀಲೋಕಕೆ ಇರ್ಪತ್ತೈದು ಸಾಸಿರ ಲೆಕ್ಕದ ರಾಮಾಯಣಂಗಳ್ ಬಂದುವೆಂದುಂ ತಿಳಿಪಿದಿರ್. ಆದೊಡೆಮ್ಮಂ ಕೇಳೆ ಪಟ್ಟನಿತು ರಾಮಾಯಣಂಗಳೊಳಾರಂ ಪಿರಿದು ಬಣ್ಣಿಸಿರ್ಪುದು ? ಅವುಗಳೊಳಾವರಾಮಾಯಣಂ ಕೇಳಲ್ತಕ್ಕುದು ? ಎಂಬಿನಿತಂ ಕೂರ್ಮೆಯಿಂದಱಿಪಲಕ್ಕುಂ.

ಈ ನುಡಿಗೇಳ್ದು ವಾಲ್ಮೀಕಿ ತಾಂ ಕಿಱುನಗೆವೀಱಿ ಕರತಲಾಮಲಕದಂತೆಲ್ಲಂ ಬಗೆಗೊಡರಲ್ ಶ್ರೀರಾಮಚಂದ್ರಮಂ ಚಿದಂಬರದೊಳೊಪ್ಪಿರಲೊರೆದಂ,

ಒಳ್ಳಿತುಸಿರ್ದೈ, ಚಿರಂಜೀವಿಯೇ, ಅನಿತೆಲ್ಲಮನಾನೊರ್ವನೆ ಕೇಳ್ದೆನಾದೊಡಂ ಕೇಳ್ದಂತೆ ಪೇೞಲೆನಗುಂ ಸಾಧ್ಯಮಲ್ತು ; ಆದೊಡಂ ಬಲ್ಲನಿತು ಪೇೞ್ವೆಂ, ಕೇಳ್. ಆ ಬ್ರಹ್ಮಲೋಕದೊಳೆಸೆವ ಶ್ರೀರಾಮಕಥಾಮೃತಭರಿತಶತಕೋಟಿರಾಮಾಯಣಮಹಾರ್ಣವದತ್ತಣಿಂ ಪಂಚವಿಂಶತಿಸಾಹಸ್ರಚಾರಿತ್ರಪೀಯೂಷಕಣಂಗಳ್ ಶಿವನ ಜಟಾಜೂಟದಿಂ ಕೆಳಗೆ ಜಗುಳ್ದ ವಿಯದ್ಗಂಗಾಸಲಿಲಬಿಂದುಗಳಂತೆ ಭೂಲೋಕಮಂ ಪೊರ್ದಿದುವು. ಅವುಗಳೆಲ್ಲಂ ಭೂಸ್ವಾಭಾವ್ಯಂಗೊಂಡ ಬಾಂಬೊಳ್ದ ನೀರ್ವನಿಗಳವೊಲ್ ಮಾನುಷಚಾರಿತ್ರಗಂಧಮಂ ತಾಳ್ದಿದುವು. ಅದಱೊಳಂ ಧರೆಯಂ ಪೊರ್ದೆ ಸ್ವಾರಸ್ಯಂಗುಂದಿದ ಸ್ವರ್ಧುನೀಜಲಲೇಶಂಗಳ ತೆಱದೆ ಸೀತಾಮಾಹಾತ್ಮ್ಯಮಾಧುರ್ಯಂ ಸಂಪೂರ್ಣಂ ಕಾಣಿಸದು. ಆದುದಱಿಂ ದ್ರುಹಿಣಲೋಕದೊಳಡಂಗಿರ್ದು ಶ್ರಾವ್ಯಮಪ್ಪ ರಾಮಾಯಣಂಗಳೊಳ್ ಕಾಕುತ್ಸ್ಥಚಾರಿತ್ರಮುಮಂ, ಮೇಣ್ ಮೂಲಪ್ರಕೃತಿಭೂತೆಯಪ್ಪ ಸೀತಾಚಾರಿತ್ರಮುಮಂ ನೀನೆಮ್ಮ ಪ್ರಿಯಶಿಷ್ಯನಪ್ಪ ಕತದಿನೊರೆವೆಂ.

ಜಾನಕೀದೇವಿ ತಾಂ ಸೃಷ್ಟಿಯ ಆದಿಭೂತಮಹಾಗುಣೆಯುಂ ಪ್ರಕೃತಿಯುಂ, ಸ್ವರ್ಗಸಿದ್ಧಿಯುಂ, ತಪಸ್ಸಿದ್ಧಿಯುಂ, ಐಶ್ವರ್ಯರೂಪಿಣಿಯುಂ, ಮೂರ್ತಿಮಂತೆಯುಂ, ಬ್ರಹ್ಮಾಂಡನಾಯಿಕೆಯುಂ, ಕಾರಣಕಾರಣಿಕೆಯುಮಪ್ಪಳ್. ಅವಳಂ ಬ್ರಹ್ಮವೇದಿಗಳ್ ವಿದ್ಯೆಯೆಂದುಂ, ಅವಿದ್ಯೆಯೆಂದುಂ, ಸಗುಣೆಯೆಂದುಂ, ನಿರ್ಗುಣೆಯೆಂದುಂ, ಪ್ರಕೃತಿಯೆಂದುಂ, ವಿಕೃತಿಯೆಂದುಂ, ದೇವಿಯೆಂದುಂ, ಚಿನ್ಮಯಿಯೆಂದುಂ, ಚಿದ್ವಿಲಾಸಿನಿಯೆಂದುಂ, ಮಹಾಕುಂಡಲಿನಿಯೆಂದುಂ, ಪೇಳ್ವರ್. ಅವಳಿಂದಮೆ ಈ ವಿಶ್ವಂ ಶೋಭಿತಮಾಗಿರ್ಕುಂ, ಮತ್ತಮವಳಂ ತತ್ವದರ್ಶಿಗಳ್ ಹೃದಯದೊಳ್ ಬಯ್ಸಿಟ್ಟು ಹೃದ್ಗ್ರಂಥಿಯಂ ವಿಘಟ್ಟನಂಗೆಯ್ದು ತಾಂ ಸುಖಮೂರ್ತಿಯಪ್ಪರ್. ಎಲೈ ಸುವ್ರತ, ಏಗಳ್ ಧರ್ಮಗ್ಲಾನಿಯುತ್ಪನ್ನಮಪ್ಪುದೋ, ಮೇಣೇಗಳಧರ್ಮದಭ್ಯುದಯಮಪ್ಪುದೋ, ಆಗಳ್ ಶಕ್ತಿಪುಟ್ಟಲೆಡೆಯಪ್ಪುದು. ಇಂತಿವಳ್ಗಂ ಸಾಕ್ಷಾತ್ಪರಮಾತ್ಮಂ ಪರಮೇಶ್ವರನಪ್ಪ ರಾಮಂಗಂ ಆಕಾರದೊಳೆನಸುಂ ಭೇದಮಿರದು. ಇದನಱಿಯುತೆಯೆ ಸಂತರ್ ಸ್ವಾಂತಸಂತುಷ್ಟಿಯಿಂ ಮುಕ್ತಿಸೀಮಂತಿನಿಯಂ ನಿಟ್ಟಿಪರ್; ಸಂಸಾರಿಗಳ್ ಮಿಟ್ತುವಿನ ಬಾಯಿಂ ತಪ್ಪಿದಪರ್. ಶ್ರೀರಾಮನಾದೊಡೆ ಅಚಿಂತ್ಯಂ, ನಿತ್ಯಂ, ಸರ್ವಸಾಕ್ಷಿ, ಸರ್ವಾನ್ತರ್ಯಾಮಿ, ಸರ್ವಲೋಕೈಕಕರ್ತಾರಂ, ಆನಂದಮೂರ್ತಿಯೆನಿಪ್ಪಂ; ಕಾಲ್ಗಳಿಲ್ಲದೆಯುಂ ಪರಿದಪಂ; ಕೆಯ್ಗಳಿಲ್ಲದೆಯುಂ ಪಿಡಿದಪಂ; ಕಣ್ಗಳಿಲ್ಲದೆ ಕಣ್ಬಪಂ; ಕಿವಿಗಳಿಲ್ಲದೆ ಕೇಳ್ದಪಂ. ಅಂತಾತಂ ವಿಶ್ವಮೆಲ್ಲಮಂ ತಿಳಿದೊಡಂ ವಿಶ್ವಮೆಂತುಮವನನಱಿಯದು. ಇದರ್ಕೆಯೆ ಈತಂಗೆ ಪುರಾಣಪುರುಷನೆಂಬರ್. ಇಂತಪ್ಪ ಪುರಾಣಪುರುಷನ ಮತ್ತಂ ಪರಪ್ರಕೃತಿಯ ಜನ್ಮಕಾರಣಮೆಂತಂತೆಯೆ ಬಣ್ಣಿಪೆಂ. ಅರೂಪಮಿರ್ದು ಸರೂಪಮೆಂತಾಯ್ತು? ಇದಂ ವಿಚಾರಿಸಲ್ ಮರ್ತ್ಯರನನುಗ್ರಹಿಸಲೆಂಬುದೆ ಮುಖ್ಯಕಾರಣಮಲ್ತೆ.

ಎಂಬಲ್ಲಿಗೆ ಅದ್ಭುತರಾಮಾಯಣದೊಳ್,
ಪ್ರಥಮಾಶ್ವಾಸಂ ಸಂಪೂರ್ಣಂ.

# ದ್ವಿತೀಯಾಶ್ವಾಸಂ.

ಕೇಳ್ವುದು, ಇಕ್ಷ್ವಾಕುಕುಲಾಂಬುಧಿಯೊಳ್ ರಾಮಚಂದ್ರಮನೆ ಹಗೆ ಪುಟ್ಟಿದನೆಂದುಮೀರತ್ನಗರ್ಭೆಯೊಳ್ ಸೀತಾರತ್ನಂ ಜನಿಸಿರ್ದ ಬಗೆ ಯೆಂತೆಂದ್ಮುಸಿರ್ವೆಂ.

ಮೊದಲ್ ಅಂಬರೀಷಚಾರಿತ್ರದತ್ತಣಿಂ ರಾಮಲೀಲಾವಿನೋದಂ ವ್ಯಕ್ತಮಕ್ಕುಂ.

ಮುನ್ನಮೀಪೊಡವಿಯೊಳ್ ತ್ರಿಶಂಕುವೆಂಬೊರ್ವಂ ನೇಸರ್ಬೞಿಯ ರಾಯಂ ಪಲವುಂ ಪಗಲರಸುಗೆಯ್ಯುತ್ತುಮಿರ್ದಂ. ಈತಂಗೆ ಸರ್ವಲಕ್ಷಣ ಲಕ್ಷಿತೆಯಾದ ಪದ್ಮಾವತಿವೆಸರ ಪಟ್ಟದರಸಿಯುಂಟು. ಜಂಪತಿಗಳ್ ಮೆಯ್ಯೆರಡು ಮನಮೊಂದೆಂಬ ನ್ಯಾಯದಿನೆಱಕಮಿರ್ದರ್. ಸರ್ವಸುಖಭೋಗಂಗಳೊಳುಂ ಕೊರತೆಯಿಲ್ಲಮಾದೊಡಂ ಬಹುಕಾಲಕೆ ಸಂತಾನಂ ತಲೆದೋರ್ದುದಿಲ್ಲಮೆಂಬ ಕುಂದೊಂದೆಯೆ ಎಲ್ಲಾಭೋಗಂಗಳೊಳುಂ ನೈರಸ್ಯಮಂ ಪುಟ್ಟಿಸಿದುದು. ಕತಮಿದಱಿನವರಿರ್ವರುಮೇಗಳುಂ ಚಿಂತೆಯುನಪ್ಪುಕೆಯ್ದು ರಾಜ್ಯವಿಷಯಂಗಳುಮಂ ಭೋಜ್ಯವಿಷಯಂಗಳುಮಂ ತೊಱೆದರ್. ಬೞಿಯಮಾಮಾರಾಯಂ "ಸರ್ವಂ ವಿತ್ತಾಪ್ತಲಾಭಂ ಸತಿತನುಜಸುಖಂ ಪೂರ್ವಕರ್ಮಾನುಸಾರಂ" ಎಂದು ಬಗೆದಂದು, "ಆಸೆಯನುೞಿಯೆ ಲೇಸಕ್ಕುಂ" ಎಂಬ ನಾಣ್ನುಡಿಯಂ ಪಿಡಿದು, ದುಗುಡಮನುೞಿದು ಮುನ್ನಿನೋಲ್ ನಿಜವಿಷಯವಿಷಯಂಗಳಂ ವಿಚಾರಿಸಿ, ವಿಭವೋಪೇತಂ ವಿಪ್ರರ್ಗೆ ವಿವಿಧದಾನಧರ್ಮಂಗಳೊಳ್ ವಿತ್ತಮಂ ವಿಶೇಷಂ ವಿನಿಯೋಗಂಗೆಯ್ದು, ಯಜ್ಞಾದಿಗಳನೆಸಗಿ, "ಸುಕೃತಮೆ ತಾಂ ಸೌಖ್ಯಮೂಲಮಿಹಕುಂ ಪರಕುಂ" ಎನುತೆ, ಒರೊಂದೆಡೆಯೊಳ್ ವಾಪೀಕೂಪತಟಾಕಂಗಳ ನೇರ್ಪಡಿಸಿ, ಪೆರ್ವೀಧಿಗಳಂ ಪಡಿಸಿ, ಮೇಣೊರೊಂದೆಡೆಯೊಳಱವಟ್ಟಿಗೆ ಸತ್ರಂಗಳಂ ಕಟ್ಟಿಸಿ, ಇಂತು ಜನರ ಕೂರ್ಮೆಗೀಡಾದಂ. ಆಮಾರಾಯಿತಿಯುಂ "ನಂಬಿದವರ್ಗಿಂಬೀವಂ" ಎಂಬ ಅಪ್ಪು

ತನ ಅಚ್ಚರಿಯೆನಿಪೀಪೆಂಪನಿಚ್ಚೈಗೊಂಡು, ನಚ್ಚಿನಿಚ್ಚಂ ಸಚ್ಚಿದಾನಂದನಪ್ಪ, ಯೋಗನಿದ್ರಾಭರದಿಂ ಶೇಷಪರ್ಯಂಕಶಾಯಿಯಪ್ಪ, ತಮೋಗುಣದಿಂ ಕಾಲರುದ್ರನುಂ, ರಜೋಗುಣದಿಂ ಬ್ರಹ್ಮನುಂ, ಮೇಣ್ ಸತ್ವಗುಣದಿಂ ವಿಷ್ಣುವುಮೆನಿಪ್ಪ ಪರಮೇಶ್ವರನಂ, ತಾರಕಬ್ರಹ್ಮನಂ, ನಾರಾಯಣನಂ ಮನೋವಾಕ್ಕಾಯವೃತ್ತಿಗಳಿಂ ಭಜಿಸುತಿರ್ದಳ್. ಮತ್ತಂ ವಿಷ್ಣುಭಕ್ತರ ನೆಲ್ಲರಂ ದಾನಮಾನಾರ್ಜನಂಗಳಿಂ ಸಂಭಾವಿಸುತಿರ್ದಳ್. ಇಂತು ದಶ ಸಹಸ್ರವರ್ಷಂಗಳ್ ಕಳೆಯಲೊಂದು ದ್ವಾದಶೀದಿನಮುವಳುಪೋಷಣಂಗೆಯ್ದು, ನಿಜಕಾಂತಂಬೆರಸು ವಿಷ್ಣುಸನ್ನಿಧಿಯೊಳ್ ಪವಡಿಸಿರಲ್, ಭಾವಕಿಯ ಭಕ್ತಿಗೊಲ್ದ ಭಗವಂತನಂದಿನಿರುಳೊಳ್ ಪುರುಷವೇಷಮಂ ತಾಳ್ದು ಬಂದು—" ತನ್ನತ್ತಣಿನೇಂ ವರಮಂ ಬಯಸುವೌ?" ಎಂದು ಕೇಳ್ದಂತೆಯುಮದರ್ಕೆ ತಾಂ ವಿಷ್ಣುಭಕ್ತಿಪರಾಯಣನುಂ, ಸಾರ್ವಭೌಮನುಂ, ಮಹಾತೇಜಸ್ವಿಯುಂ, ಸ್ವಧರ್ಮನಿರತನುಮಪ್ಪ ಪುತ್ರನಂ ಕರುಣಿಪುದೆಂದು ವಾರ್ನುಡಿಯಿಂ ಬಿನ್ನಯಿಸಿದಂತೆಯುಂ, ಬಳಿಯುಮಾದಿವ್ಯಪುರುಷಂ—" ಅಂತಕ್ಕೆ," ಎಂದೊಂದು ಫಲಮನನುಗ್ರಹಿಸಿ ಅಂತರ್ಧಾನಮಾದಂತೆಯುಂ ಕನಸುಗಂಡೆಚ್ಚತ್ತಳ್. ತನ್ನ ಬಳಿಯೊಳ್ ಸ್ವಪ್ನಫಲದಂತೆ ಫಲಮಿರಲ್ ಕಂಡು, ಪದ್ಮಾವತಿ ತಾಂ ಪದ್ಮನಾಭಂ ಕರುಣಿಸಿದ ಪಣ್ಣಂ ಪತಿಗೆ ತೋರ್ದು ಕನಸಿನ ಪರಿಯೆಲ್ಲಮಂ ತಿಳಿಪಿದಳ್. ಆನಂದ ತುಂದಿಲಸ್ವಾಂತರಾದಾದಂಪತಿಗಳ್ ಪುಂಡರೀಕಾಕ್ಷನಂ ನೆನೆದು ಪಣ್ಣದಂ ಭಕ್ಷಿಸಿದರ್. ಅಂತು ಭಕ್ಷಿಸಿದ ಕೆಲದಿನಂಗಳ್ಗೆ ಪೆಣ್ಗೆ ನೀರ್ನಿಲ್ತು, ಬಸಿರ್ಬಳೆದು ಮೇಣೊಂದು ಶುಭಮುಹೂರ್ತದೊಳ್ ಕನಂಬರಿದಂತೆ ಚಕ್ರಲಕ್ಷಣಸಂಪನ್ನನೊರ್ವಂ ಸುಪುತ್ರಂ ಪುಟ್ಟಿದಂ. ಸಂತಸಮನೇವೇಳ್ವೆಂ; ಉಕ್ಕೆವಮಾಯ್ತುರಮನೆಯೊಳುಂ ನೆರೆವೊರೆಯೊಳುಂ. ದೀನರ್ ಧನಮಂ ಕಂಡಂ ತಾಗಲ್, ನಾರಾಯಮಂ ಮೊದಲಿಂ ನಾಲ್ಮಡಿಯಾಗಿ ದಾನಧರ್ಮಾದಿಸತ್ಕಾರ್ಯಂಗಳನೆಸಗಿದಂ. ವಳಕ್ಷಪಕ್ಷಚಂದ್ರಮನಂತೆ ದಿನಕ್ರಮಂ ವೃದ್ಧಿಗೊಂಡೊಪ್ಪುವ ಕುವರಂಗೆ ಜಾತಕರ್ಮಾದಿ ಸಂಸ್ಕಾ

ರಂಗೆಯ್ದು, ಅಂಬರೀಷನೆಂಬ ಪೆಸರಿಟ್ಟು, ಲೌಕಿಕವೈದಿಕ ವಿದ್ಯೆಗಳೆರಡ ಱೊಳುಂ ಸಮರ್ಥನೆನಿಪ್ಪ ಸದ್ಗುರುವತ್ತಣಿಂ ವಿದ್ಯಾಭ್ಯಾಸಮಂ ಮಾಡಿ ಸಿದಂ. ಏಕಪಾಠಿಯಾದ ಈ ಕುಮಾರಂ ಕುಮಾರನಂತೆ ಚತುರ್ದಶ ವಿದ್ಯೆಯೊಳುಂ, ಚತುಷ್ಷಷ್ಟಿಕಲೆಗಳೊಳುಂ ಪ್ರವೀಣನಾಗಲಾತಂಗುಚಿ ತಕಾಲದೊಳ್ ಸೌಂದರ್ಯಸೌಶೀಲ್ಯ ಸೌಭಾಗ್ಯವತಿಯಪ್ಪ ಕನ್ನೆಯಂ ಪರಿ ಣಯಮನೆಸಗಿ, ಯುವರಾಜಪಟ್ಟಮಂ ಕಟ್ಟಿ ಕೃತಕೃತ್ಯನಾದೀತ್ರಿಶಂಕು ಮಹಾರಾಜಂ ಕೆಲಗಾಲದ ಮೇಲೀ ಪೊಡವಿಯೊಡೆತನಮಂ ಅಣ್ಮುಗಂಗೆ ಸಂಪೂರ್ಣಮೊಪ್ಪಿಸಿ, ತಾನಭಿನವಸ್ವರ್ಗಸಾಮ್ರಾಜ್ಯಾಧಿಕಾರಿಯಾದಂ.

ಇತ್ತಲಾದಿಗಂತವಿಶ್ರಾಂತಕೀರ್ತಿಯಪ್ಪ ಅಂಬರೀಷಮಹಾರಾಜಂ ರಾಜ್ಯಪದಮಂ ಮಂತ್ರಿಯೊಳ್ ನಿಲಿಸಿ, ತಾಂ ಭಗವದನುಗ್ರಹಮಂ ಪಡೆ ದಪೆನೆನುತೆ ಘೋರಕಾನನಮಂ ಸೇರ್ದು, ಭಕ್ತಹೃತ್ಪುಂಡರೀಕಮಧ್ಯ ಸ್ಥನುಂ, ಬ್ರಹ್ಮವಿಷ್ಣುಶಿವಾತ್ಮಕನುಂ, ಚತುರ್ಭುಜನುಂ, ಶಂಖಚಕ್ರಗ ದಾಪದ್ಮಶೋಭಿತನುಂ, ಶುದ್ಧಜಾಂಬೂನದವರ್ಣನುಂ, ಸರ್ವಾಭರಣ ಸಂಯುಕ್ತನುಂ, ಪೀತಾಂಬರಧಾರಿಯುಂ, ಪುರುಷೋತ್ತಮನುಮಪ್ಪ ನಾರಾಯಣನಂ ಕುಱಿತು, ಸಾಸಿರಗಾಲಂ ಬರೆಗಂ ತಪಸನೆಸಗುತಿರ್ದಂ. ಬೞಿಯಂ ಗರುಡಾರೂಢನಪ್ಪ ಪರಮಾತ್ಮಂ ಭಕ್ತನಂ ಪರಿಕಿಸಲೆಂದು ವೈನತೇಯನನ್ಯೈರಾವತಮಪ್ಪಂತೆ ಮಾರ್ಪಡಿಸುತೆ ತಾನಿಂದ್ರನಾಗುತೆ ಅಂಬರೀಷಂಗೆ ಕಾಣಿಸಿ ಕೊಂಡಿಂತೆಂದಂ:—' ಎಲೆ ಅಂಬರೀಷ' ಗೆಲವಕ್ಕೆ ಆನಿಂದ್ರಂ; ನಿನ್ನನುದ್ಧರಿಸಲೆಂದು ಬಂದೆಂ. ಏಂ ವರಮನಿಚ್ಛೈಪ್ಪೈ ? ಕರು ಣಿಪೆಂ. ' ಇಂತುಸಿರೆ, ಚೌದಂತಮನೇರ್ದ ಮೆಯ್ಗಣ್ಣನಂ ಕಿಸುಗಣ್ಣಿ ಕಂಡಾರಾಯಂ—' ಅಮರ್ದುಂಡರೊಡೆಯ, ನಿನ್ನಂ ಕುಱಿತಾಂ ತಪ ಮಾಚರಿಸಿದುದುಮಿಲ್ಲಂ. ಮೇಣ್ ನಿನ್ನತ್ತಣಿನಾವ ವರಮುಮಂ ಬಯ ಸುವುದುಮಿಲ್ಲಂ. ಎನ್ನೊಡೆಯನಲರ್ವೊಡೆಯನಲ್ಲದೆ ಬಿಡೌಜನಲ್ತು. ಇಂತೊರೆವೆನೆಂದು ಮುನಿಸುದಾಳದಿರ್. ಬಱಿದೆನ್ನ ತಪಸಿಗೆ ಬನ್ನಮೆ ಸಗದೈ ಎಹಗೆ ಬಂದೈ ಅಹಗೆ ಪಿಂದಿರುಗ್ಗೈ.'' ಎಂದು ಪಡಿನುಡಿಗುಡುತೆ,

ತನ್ನೊಳ್ ತಾಂ ಕಣ್ಣಿಟ್ಟಂ. ಮತ್ತಮಾರಾಯತವಸಿ ತನ್ನೊಳಿಟ್ಟಿರ್ದ ದೃಢಭಕ್ತಿಯಂ ಕಾಣುತೆ ಸಂತಸಂದಾಳ್ದು, ಮೇಣವನ ಮಾರ್ನುಡಿಗೆ ಮುಗುಳ್ನಗೆಗೊಂಡು, ಜನಾರ್ದನಂ ತಾಂ ಪ್ರತ್ಯಕ್ಷನಾದಂ. ಆವನಮೆ ಯ್ಯೊಗರಿಂ ಈ ಪುಷ್ಪವಂತರ್ಗೆ ಪೊಳೆಪೊದವಿದತ್ತೋ, ಆವನ ಕಣ್ನೋ ಟದಿನೀಲೋಕಂ ಪಾವನಮಪ್ಪುದೋ, ಆವನ ಬಾಯಿಂ ವೇದರಾಶಿಗ ಳೊಗೆದುವೋ, ಮೇಣಾವನ ನವಿರ್ನವಿರೊಳೀಸಕಲಚರಾಚರ ವಸ್ತುಗಳೆ ಸೆದಿರ್ಪುವೋ, ಆ ವನಜಾಕ್ಷನ ದಿವ್ಯಮೂರ್ತಿಯಂ ಕಣ್ತಣಿಯೆ ಕಂಡು ಸಂತಸಮುನ್ನೀರೊಳ್ ಮುೞುಂಗಿ ಮುೞುಂಗಿ, ಮೆಯ್ಮಱೆದೆೞ್ಚರ್ಗೊಂ ಡು ಇಂತು ಪಾಡಿದಂ:—"ಏ ಪಕ್ಕಿದೇರ, ಎನ್ನೊಡೆಯ, ಮೇಲೆಸ ಗ್ಯೆ. ಆನಂದಮೂರ್ತಿ, ನೀನೆ ಅನಂತಂ, ನೀನೆ ಹವ್ಯವಾಹಂ, ಪ್ರಭಂ ಜನಂ ನೀನೆ, ನೀನೆ ಕಮಲಾಕ್ಷಂ, ನಿನ್ನಂ ಮಱೆವುಗುವೆಂ; ನಿನ್ನಿಂ ಪೆಱತು ಎನಗಿರ್ಕೆಯಿಲ್ಲಂ. ಆದಱಿನೆನ್ನಂಪೊರೆಯ್ಯೆ. ಮೊದಲೊಳ್ ಸಗ್ಗಿ ಗರೊಡೆಯನುಂ ತಾನೆಂಬ ಮಾೞ್ಕೆಯಿನಂತೆನ್ನಂ ನುಡಿಯಿಸಿದೊಡಂ ತಾಂ ತಿಳಿಯದೆ ಅಸಡ್ಡೆಯಂ ತೋರ್ದೆಂ. ತಪ್ಪನಿತಂ ಮನ್ನಿಸಿ ಕಾವು ದು." ಎಂದೆಱಗಿದರಸನಂ ಕಂಡು, ದೇವಂ—"ಎಲೈ ಭಕ್ತಶಿರೋಮ ಣಿಯೆ, ನಿನ್ನ ದಿಟಬಕುತಿಯಂ ನೋೞ್ಪೆನೆಂದಾರೂಪಿಂ ಬಂದೆನಲ್ಲದೆ ಪೆಱತಿಲ್ಲಂ; ಭಕ್ತಿಯಂತಿರವೇೞ್ಕುಂ; ಸಂಪೂರ್ಣಂ ಸಂತುಷ್ಟನಾದೆಂ ನಿನ್ನ ಭಕ್ತಿಗೆ; ಮನದ ಬಯಕೆಯನುಸಿರ್ವೈ; ಕರುಣಿಪೆಂ" ಎಂದೊರೆ ದಂ. ಆನುಡಿಗೇಳ್ದಂಬರೀಷಮಹಾರಾಜಂ ಗದ್ಗದವಾಣಿಯಿಂ—"ಪರಮಾ ತ್ಮ, ಸ್ವಾಮಿ, ತ್ರಿಕರಣದೊಳುಮಾಂ ವಿಷ್ಣುಭಕ್ತಿಪರಾಯಣನುಂ ಯಜ್ಞಹವನದೇವಸೇವೆಯೊಳ್ ನಿರತನುಮಪ್ಪಂತೆಯುಂ, ಪ್ರಜೆಗಳ್ ವೈ ಷ್ಣವರಪ್ಪಂತೆಯುಂ, ಶತ್ರುಗಳ್ ಮಿತ್ರರಪ್ಪಂತೆಯುಂ, ಅನುಗ್ರಹಿಪುದು. ಎಂದು ಬಿನ್ನಯಿಸಿದೊಡನೆಯೆ "ತಥಾಸ್ತು" ಎಂದು ಮಾಧವಂ ಮು ನ್ನಂ ತನಗೆ ರುದ್ರಾನುಗ್ರಹದಿಂ ದೊರೆಕೊಂಡ ಸುದರ್ಶನಮಂ ಮೆಚ್ಚ ನಿತ್ತು, ಋಷಿಶಾಪಂ ಶತ್ರುಬಾಧೆ ರೋಗದುಃಖಾದಿಗಳಂ ದೂರಂಮಾ

ಟಿಪ್ಪುದೆಂಬ ಪಾಱುಂಬಳೆಯ ಮ್ಮೈಮೆಯನೊರೆದು ತಾನಡಂಗಿಪೋಗೆ; ಚಕ್ರಿಶಾಯಿಯಪ್ಪ ಚಕ್ರಿಯನುಗ್ರಹದಿಂ ಸಹಿತಮಾಚಕ್ರಮಂ ಚಕ್ರವರ್ತಿ ಕೈಕೊಂಡು ನಿಜರಾಜಧಾನಿಯಪ್ಪ ಅಯೋಧ್ಯಾಪಟ್ಟಣಕ್ಕೆಯ್ತಂದು ಕರುಣೆಯಿಂ ಪ್ರಜಾಪಾಲನೆಯುಂ, ಶ್ರದ್ಧೆಯಿಂ ಹವ್ಯಕವ್ಯಂಗಳಂ, ಭಕ್ತಿಯಿಂ ದೇವತಾಪೂಜೆಯುಂ ಗೆಯ್ಯುತುಂ, ಚಿರಕಾಲಂ ಕಡಲ್ಗಳೆ ಕಡೆಗಳಪ್ಪ ಪೊಡವಿಯೊಡೆತನಮಂ ಬಿಡದೆ ನಡೆಯಿಸುತಿರ್ದಂ. ನೂಱಶ್ವಮೇಧಂಗಳನನಿತೆ ವಾಜಪೇಯಂಗಳನೆಸಗಿ ಪೇರ್ವಡೆದೀತನ ಕಾಲದೊಳ್ ಮನೆಮನೆಗಳ್ ಸಾಲಿಗ್ರಾಮಾದಿ ದೇವಪೂಜಾವಾದ್ಯಘೋಷಂಗಳಿಂ, ವೇದಘೋಷಂಗಳಿಂ, ಈಶ್ವರನಾಮಸಂಕೀರ್ತನಘೋಷಂಗಳಿಂ, ಯಜ್ಞಘೋಷಂಗಳಿಂ, ತುಂಬಿರ್ದುವು. ತಿರೆಯುಂ ಮೞೆಬೆಳೆಗಳಿಂ ಚೆನ್ನೊಪ್ಪಿ, ಬಱಗಾಲಮಂ ಕಾಣದಾಯ್ತು, ಪ್ರಜೆಗಳುಂ ರೋಗಾದ್ಯುಪದ್ರವಂಗಳ ಗುಱುತನಱಿಯರ್. ಇಂತಪ್ಪ ಪ್ರಜೆಗಳೇ ಅಗ್ಗಿಮೊಗರುಂ, ಪೊೞಲೇ ಸಗ್ಗಮುಮಾವಾರಾಯನೇ ದೇವೇಂದ್ರನುಮಾಗೆ ಚೆಲ್ವಾದುದು.

ಎಂಬಲ್ಲಿಗೆ ಅದ್ಭುತರಾಮಾಯಣದೊಳ್
ದ್ವಿತೀಯಾಶ್ವಾಸಂ, ಸಂಪೂರ್ಣಂ.

## ತೃತೀಯಾಶ್ವಾಸಂ.

ಅಂತಿರ್ಪ ಭೂಭೃದ್ವರನೊಳ್ ಸೃಷ್ಟಿನ ಬಿತ್ತಿನಂತೆ ಶ್ರೀಮತಿಯೆಂಬೊಂದು ಪೆಣ್ಮಣಿ ಪುಟ್ಟಿದುದು. ಬಹುಕಾಲಕೆ ಪೆತ್ತಣುಗಿಯಂ ಮುದ್ದುಗೆಯ್ದು ಅರೆಗಳಿಗೆಯಾದೊಡಮಗಲದಾವಗಂ ತೊಡೆಯೊಳಿರಿಸಿಕೊಂಡು ಪಟ್ಟವಣೆಯೊಳಂ ಸೆಜ್ಜೆವನೆಯೊಳಂ ಸೊಗಯಿಸುತಿರ್ದಂ. ಅನ್ನೆಗಮೊರ್ಮೆ ರಾಯನೊಡ್ಡೋಲಗಂ ಗೊಟ್ಟು ಅಣುಗಿವೆರಸಿರ್ಪಿನಂ; ಪೊಗೆಯುಳಿದಗ್ಗಿಯವೊಲೊಂದೆಡೆಯೊಳ್, ತಣ್ಪುಗೊಂಡ ನೇಸಱವೋಲ್ ಪೆಱತೊಂದೆ

ಡೆಯೊಳ್, ಬೆಳಗುವ ನಾರದಪರ್ವತರೆಂಬಿರ್ವರ್ ಮುನಿಗಳ್ ಏಕಕಾಲ ದೊಳಾಗಸದತ್ತಣಿನೆಂಬರೀಷನರಮನೆಗೆಯ್ತಂದರ್. ಕಂಡಾಗಳ್ ಭಕ್ತಿ ಮೆಱೆಯೆ ಆಸನದಿಂದಿೞಿದೊಡನೆಯೆ ಪೋಗಿ ಕರೆತಂದು ಅರ್ಘ್ಯ ಪಾ ದ್ಯಂಗಳನಿತ್ತು, ಸಮರ್ಪಿಸಿ, ತಾನುಮವರ ಕೆಲದೊಳ್ ಮಂಡಿಸಿ, ಮೆದು ನುಡಿಯಿಂ ಕುಶಲಮಂ ಬೆಸಗೊಳುತಿಂತುಪಚರಿಸುತಿರ್ದಂ. ಒೞಿಕವರ ಭ್ಯಾಗತರಿರ್ವರುಂ ರಾಯನ ಸನಿಯದೊಳೊಪ್ಪಿರ್ದ ಬಾಲಿಕೆಯಂ ದಿಟ್ಟಿ ಸುತುಂ ತಮ್ಮೊಳೆ-ಪಱಿಮೆಯಂತೆ ಕರ್ಪಿಡಿದ ಮುಂಗುರುಳುಂ, ಪಾವಿನ ಪೆಡೆಯಂತೆ ಸರಿಗೊಂಡ ಜಡೆಯುಂ, ಚಂದಿರನಂತೆ ಸಂತಸಮಂ ಪುಟ್ಟಿಪ ಮೊಗಮುಂ, ಕಾವನ ಸಿಂಗಾಡಿಯಂತೆ ಬಾಗಿರ್ಪ ಪುರ್ಬುಂ, ನೀರ್ವೂವೆ ಸೞಿಂತೆ ನೀಳಮಪ್ಪ ಕಣ್ಣುಂ, ಸಂಪಗೆಮೊಗ್ಗೆಯಂತೆ ಸೊಗಸುದೋರ್ಪ ಮೂಗುಂ, ತೊಂಡೆವಣ್ಣಂತೆ ಕೆಂಪೆಸೆವ ಬಾಯ್ದೆಱೆಯುಂ, ದಾಳಿಂಬದ ಬಿತ್ತಿನಂತೆ ಸಾಲ್ಗೊಂಡೆಸೆವ ಪಲ್ಗಳುಂ, ಕನ್ನಡಿಯಂತೆ ಪೊಳೆವ ಕೆಕ್ಕೆ ಯುಂ, ಬೆಳ್ದಿಂಗಳಂತೆ ಪಸರಿಪ ನಗೆಯುಂ, ಬಲಮುರಿಸಂಕಿನಂತೆ ಗುಜ್ಜು ಗೊಂಡು ರಂಜಿಪ ಕೊರಲುಂ, ಸೊಂಡಲಂತೆ ದಟ್ಟಮಾದ ತೋಳುಂ, ಕೆಂದಳಿರಂತೆ ಕೆಜ್ಜನೆಯ ಮುಂಗೆಯ್ಯುಂ, ಗಱಿವೂವಂತೆ ಮೊನೆಗೊಂಡು ಗುರುಂ, ಸಿಂಗದ ನಡುವಿನಂತೆ ಬಡತನವೊದವಿದ ನಡುವುಂ, ಮಱಲೊ ಟ್ಟಿಲಂತೆ ಬೆಟ್ಟಿತಪ್ಪ ಪೂಱಿವಾಱುಂ, ದಿಂಡಿನಂತೆ ಬಲಿತು ಪೊಳೆವ ತೊಡೆ ಯುಂ, ಕೆಂದಾವರೆಯಂತೆ ಬಣ್ಣಮೊಂದಿದಡಿಯುಂ, ಒಂದಱಿಮೇಲೊಂ ದಟ್ಕಿಜಮಂ, ಪುಟ್ಟಿಪುವು. ಆರಪ್ಪಳೀಕನ್ನೆಯೆಂದು ಸಂಕಿಸುತೆ, ಅವ ರೊಳ್ ಕಲಹಾಶನಂ ತಾಂ ರಾಯನೊಡನೆ ಸರ್ವಾಂಗಸುಂದರಿಯಪ್ಪೀ ಕನ್ನೆ ಆರೆಂದಾರಯ್ಯೆ; ರಾಜಂ ಕೆಯ್ಮುಗಿದು—'' ಜೀಯ ಇವಳೆನ್ನಣು ಗಿ, ಶ್ರೀಮತಿಯೆಂಬ ಪೆಸರ್; ಪ್ರದಾನಸಮಯಮುಂ ಮುಟ್ಟಯಿಸಿ ಬಂದುದು; ಆದುದಱಿಂ ಯೋಗ್ಯಪಾತ್ರಮನಾರಯ್ಯಲ್ ತಕ್ಕುದು'' ಎಂದು ಬಿನ್ನಯಿಸಿದಂ. ನುಡಿಯುದಂ ಕೇಳುತವರಿರ್ವರಭ್ಯಾಗತರ್ಗುಂ ಬಿರ್ದಿನವರಪ್ಪ ಬಯಕೆ ಪುಟ್ಟಿದುದು. ನಿಕ್ಕುವಮಾಗಲವರಿರ್ವರುಮಾಪೆಣ್ಗೆ

ಕಣ್ಣಿಟ್ಟರ್. ಅಂತುಮೊರ್ವನ ಮನಂ ಪೆಱತೊರ್ವಂಗೆ ತಿಳಿಯಲಾದುದು. ಅನಿತಱೊಳ್ ನಾರದಂ ವ್ಯಾಜಾಂತರದಿನಾರಾಜನಂ ಬೇಱೊಂದೆಡೆಗೆ ಕರೆದುಯ್ದೇಕ್ಕಟಿಯೊಳ್ ಹದನನಿದನುಸಿರ್ದಂ. ಪರ್ವತನುಮಂತೆಯೆ ಕೇಳ್ದಂ. ಅದರ್ಕಂಬರೀಷಂ ಮನಂಬೆರ್ಚುತೆ ದಾಕ್ಷಿಣ್ಯದೊಳ್ ಸಿಲ್ಕಿ ಬೞಿಕಮಾಲೋಚಿಸುತವರ್ಗೆಂದಂ :—" ತಾಮಿರ್ವರುಮೊಂದೆ ಪೆಣ್ಗೆಯೆ ಬಯಸಿದಪಿರ್. ಮೂರ್ನುಡಿಯಲ್ ಬಗೆ ಪರಿಯದು. ಆದೊಡಂ ನಿಮ್ಮೊಳಾರ್ಗೀಬಾಲೆಯೊಲಿವಳವರ್ಗಿವಳನಿತ್ತಪೆಂ, ಸಂದೆಯಮಿಲ್ಲಂ." ಇಂತೊರೆದ ರಾಯನುಕ್ತಿಯಂ ಕೇಳ್ದಿರ್ವರುಂ—" ನಾಳೆ ಬಂದು ಕಜ್ಜಮಂ ಸಜ್ಜುಗೆಯ್ವುಜ್ಜುಗಮನುಸಿರ್ವೆವು." ಎಂದು ಬೀೞ್ಕೊಂಡರ್.

ಇತ್ತಲಿವರೊಳ್ನಾರದಂ ತನ್ನ ಬಯಕೆಯೆ ಮೇಲ್ಗೈಯಪ್ಪಂತೆ ಹರಿಯಂ ಬಲಗೊಳ್ವೆನೆಂದು ಮನೋವೇಗದಿನೊಡನೆಯೆ ವಿಷ್ಣುಲೋಕಕೆಯ್ತಂದು ವೈಕುಂಠಂಗೆ ಬಿನ್ನಯಿಸಿದನಿಂತು :—

" ಕೇಳೈ ಮುಕುಂದ, ನಿನ್ನಿ ನೆನಗೊಂದು ಮೇಲಕ್ಕುಮೆಂದಱಿ ತಾನಿಲ್ಲಿಗೆಯ್ತಂದೆಂ. ಅಂತದಂ ನೀಂ ಬಲ್ಲೆಯಾದೊಡಂ ಲೋಕರೀತಿಯಿನೊರೆವೆನೇನೆನೆ :—ಅಯೋಧ್ಯಾಪತಿಯಪ್ಪ ನಿನ್ನ ಭಕ್ತನಂಬರೀಷರಾಯಂಗೆ ಶ್ರೀಮತಿವೆಸರ ಪೆಣ್ಮಗಳುಂಟು. ಕಾರ್ಯಾಂತರದಿನಿಂದಾನಲ್ಲಿಗೆ ಪೋಗಿರೆ ಸುಶೀಲೆಯಾಬಾಲೆಯಂ ಕಂಡು ಪರಿಣಯದೆ ವರಿಸಿಕೊಳ್ವುದೆಂಬ ಮನಮೆನಗಾದುದು. ಈಪರಿಯ ಬಯಕೆ ಅಲ್ಲಿಗೆ ಏಕಕಾಲದೊಳ್ ಬಂದು ಸತ್ಕೃತನಾದ ಪರ್ವತಂಗಂ ಪುಟ್ಟಿದುದು. ಇಂತಪ್ಪ ಬಯಕೆಯಿನಾಮಿರ್ವರುಂ ರಾಯನಂ ಕೇಳೆ, ಇನಿಸುಂ ಪೊೞ್ತು ಜಾನಿಸಿ ಬೞಿಯಂ—ನಿಮ್ಮೊಳಾರನಿವಳ್ ಮೆಚ್ಚುವಳೋ ಅವರ್ಗವಳೆಂದಂ. ಆನುಡಿಗೆ-ನಾಳೆ ಬರ್ಪೆವೆಂದಿರ್ವರುಂ ಪೊಱಮಟ್ಟೆವು. ಇಂತಿದು ಪೂರ್ವ ವೃತ್ತಾಂತಂ. ಆದುದಱಿಂ ಸ್ವಯಂವರಕೆ ನಾಳೆ ನೆರವಾಗಲ್, ಪೆಣ್ ಪರ್ವತಂಗೊಲಿಯದಂತವನ ಮೊಗಮಂ ಮಂಕಡಮೊಗದಂತೆ ಮಾರ್ಪಡಿಸಲಪ್ಪುದು. ಆದೊಡೀಕುಱಿಪು ಶ್ರೀಮತಿಗೊರ್ವಳ್ಗೆಯೆ ತೋಱಲಕ್ಕು

ಮಲ್ಲದೆ ಪೆಱರ್ಗೆ ಕಾಣಿಸಲಾಗದು. ಇನಿತೊಂದುಪಕೃತಿಯನೆಸಗಲ್ ವೇೞ್ಕುಂ. ಇಂತು ಕೆಯ್ಮುಗಿದಿಸುತೆ ಬಲ್ಪುಗೆಯಿಂ ಬೇಡಿಕೊಳ್ವ ಮುನಿಯ ಕಿೞ್ಪುಗೆಗೆ ನಕ್ಕು, ದೇವಂ—" ಅತಕ್ಕೆ " ಎಂದು ಮನ್ನಿಸಿ ಕಳುಪಿದಂ. ಸಮನಂತರದೊಳ್ ಪರ್ವತನುಂ ಪದ್ಮನಾಭನ ಪದದೊಲ್ಮೆಯಂ ಪಡೆದು ಪವಣಱಿತು ಪೆಣ್ಣಂ ಪಿಡಿದಪೆನೆನುತೆ, ಪಾಲ್ಗಡಲೆಡೆಗೆ ಪರಿತಂದಂ. ಬಂದೆ ಱಗಿದ ತಪೋನಿಧಿಯಂ ಕರುಣಾನಿಧಿಯೊಲ್ದುಪಚರಿಸುತೆ ತನ್ನೆಡೆಗೆ ಬರ ಲ್ಕಾರಣಮಂ ಬೆಸಗೊಂಡಂ. ತಾನುಸಿರ್ವುದಿದುವೆ ಪೊಸಬಿನ್ನಪಮೆಂದು ಮುನ್ನಂ ನಾರದಂ ಪೇೞ್ದಂತೆಯೆ ಪೂರ್ವೋತ್ತರಂಗಳನಱಿಕೆಗೆಯ್ದು– " ದೇವ, ನೀಂ ಪಿರಿಯುಂ. ಆರ್ಗೇನೆಣಿಕೆಯಿರ್ಪುದದನೀಯಲ್ಕ ಕ್ಕವಂ. ನಾಳಿನ ಪಂತದೊಳ್ ಬಾಲೆಗೆ ನಾರದನೊಳ್ ಬೇಸರ್ಪುಟ್ಟುವವೋಲ್ ಮೊಗಂ ಕೋಡಗನ ಮೊಗದಂತೆ ಪುಟ್ಟುಗೆ. ಅಂತದನ್ಯರ್ಗೆ ತಿಳಿಯಲ್ಬಾರದು. ಇಂತೊಂದು ದಯೆಗೆಯ್ದೊಡಾಂ ಗೆಲ್ದಂ " ಎನೆ, ಕರುಣಾಳು ತಾಂ–" ಆಃ! ಇವರಿರ್ವರ್ಗಂ ಮನಮುಂ ಮೇಣ್‌ಗುಣಮುಮೊಂದೆ ಗಡಂ ತಕ್ಕುದನುಗ್ಗೆ." ಎಂದು ತನ್ನೊಳೆ ಪರಿಭಾವಿಸಿ, " ತಥಾಸ್ತು" ಎನುತೆ, ಈ ಸಮಾಚಾರಮಂ ನಾರದಂಗುಸಿರದಿರೆಂದಪ್ಪಣೆಯಿತ್ತಟ್ಟಿದಂ.

ಮಾಧವನಾಣತಿವಡೆದಿಂಗಡಲಿಂ ತಳುರ್ದು ಅಯೋಧ್ಯೆಗೆಯ್ತರ್ಪ ಬಟ್ಟೆಯೊಳ್ ಪರ್ವತಂ ತಾಂ ತನ್ನೊಳೆ–" ಗೆಲ್! ಗೆಲ್! ಪೆಣ್ಣೊಂದೆನ್ನ ಕೌಂಕುೞೊಳ್ ಸಿಲ್ಕಿದುದು. ಅಂತಪ್ಪ ಮಂಗಮುಸುಡಂ ಕಂಡು ಕನ್ನೆ ನಾರದನಂ ಒಲಿವಳೇ! ಉಃ! ಎಂದುಂ ಮೆಚ್ಚಳ್; ಒಳ್ಳಿತಾದುದು!" ಎಂದು ಪಲವಂ ಪಂಬಲಿಸುತಿರ್ದಂ. ಪೆಱತೊಂದೆಡೆಯೊಳ್ ನಾರದನುಂ– " ಆಬಾಲೆ ಪರ್ವತನಂ ಕಂಡೆನಿತು ಹಾಸ್ಯಂಗೆಯ್ವಳೋ, ಮೇಣದರ್ಕವನೆನಿತು ನಾಣ್ಚುವನೊ ಕಾಣ್ಬೆಂ" ಎನುತಾಲೋಚಿಸುತೆ ಅಯೋಧ್ಯೆಗೆ ಬರುತುಮಿರ್ದಂ.

ಎಂಬಲ್ಲಿಗೆ ಅದ್ಭುತರಾಮಾಯಣದೊಳ್
ತೃತೀಯಾಶ್ವಾಸಂ ಸಂಪೂರ್ಣಂ.

## ಚತುರ್ಥಾಶ್ವಾಸಂ.

---

ಆಲಿಸೈ ಮುನಿಪುಂಗವ, ಅತ್ತಲಂಬರೀಷಂ ನಿಜಸುತೆಯ ಸ್ವಯಂವರಕೆಂದು ಪತ್ತನದೆಲ್ಲೆಡೆಗಳಂ ಮಂಡಪತೋರಣಧ್ವಜಪತಾಕೆಗಳಿಂ ಸಿಂಗರಿಪಂತೆಯುಂ, ಬೀದಿಗಳಂ ಗಂಧೋದಕದಿಂ ಸಾರಣೆಗೆಯ್ದು ರಂಗವಲ್ಲಿಗಳನಿಟ್ಟು ಪೂಜಲ್ಲಿಗಳಂ ಬಿಟ್ಟು ಸೊಗಯಿಸುವಂತೆಯುಂ, ಅರಮನೆಯಂ ನವರತ್ನಾದಿಗಳಿನಲಂಕರಿಪಂತೆಯುಂ ಆಣೆಗೆಯ್ದು ಮಿಕ್ಕ ಸನ್ನಣದೊಳಿರ್ದಂ.

ಇಂತೊಪ್ಪುವ ನಾಡ ಸೊಬಗಂ ಕಾಣುತೆ ರಿಸಿಗಳಿರ್ವರ್ ಸಂತಸಂಗೊಂಡು ಪೇೞ್ದು ಗಡುವಿಂಗೆ ತಪ್ಪದೆಯ್ತರುವವರನರಸಂ ಸನ್ಮಾನಿಸಿ ಬೞಿಯಂ ಕುವರಿಯಂ ಸ್ವಯಂವರಮಂಡಪಕೆ ಕರೆತಂದು, ಮಗಳ್ಗೆ— " ಎಲೌ ಬಾಲೆ, ಇವರಿರ್ವರುಂ ನಿನ್ನಂ ಬಯಸಿದಪರ್. ಆದೊಡೆ ಪೆಣ್ಣೊರ್ವಳೊರ್ವಂಗಲ್ಲದೆ ಇರ್ವರ್ಗಮಾಗದುದಱಿಂ ನೀನಾರನೊಲಿವೆ, ಅವಗೀವೆಂ ನಿನ್ನಂ. ಆದುದಱಿನಿವರೊಳಾರಪ್ಪರವರ ಕೊರಲ್ಗೆ ಈವೂಸರ ಮನಿಡುವುದು. " ಎಂದುಸಿರ್ದಂ.

ಅಯ್ಯನಾಣತಿಯನಾಂತಣುಗಿ ಎನಸುಂ ನಾಣ್ಚಿ ಕರದೊಳ್ ಪೂಮಾಲೆಗೊಂಡು ಪಿಡಿನಡೆಯಂತೆ ಸಹಚರಿಯರ್ವೆರಸು ಮೆಲ್ಲನವರಿರ್ವರ ಸನಿಯಮಂ ಸಾರ್ದು ಕಣ್ಬೊಗರನಿರ್ವರೊಳಂ ಪಸರಿಸಿ ಇನಿಸುಂ ಜಾನಿಸಿ ಮೇಣ್ ನೆಲನಂ ನೋಡುತುಸಿಕನಿರ್ದಳ್.

ಬಾಲೆಯಿಂತು ಸುಮ್ಮನೆ ನಿಲ್ತಿರೆ; ಕಂಡು ರಾಯಂ-" ಏಂ ಮಗಳೆ, ಮನಂಬಂದಂಗೆ ಮಾಲೆಯಿಕ್ಕನೆ ಮಾಣ್ದೌ; ಪೆಱತೇನನೆಣ್ಣದಿರ್. ಇರ್ವರುಂ ಬೇದಬಿಜ್ಜೆಗಂಗೆ ಸರಿಮಿಗಿಲೆನಿಪರ್; ಮಾದೇವನಂತೆ ಮೈಮೆಯುಳ್ಳರ್; ಸಿರಿಯರಸನಂತೆ ಸೊಗಸುಳ್ಳವರ್; ನಾಡಾಡಿ ಕಿತ್ತಡಿಗಳಲ್ತು; ಸಂದೆಯಮಣಮಿಲ್ಲದೆ ಇವರೊಳ್ ಮನಂಬಂದವನನೊಲಿಸಿ ಕೊಳ್ವುದು," ಎಂದಱಿಪಲಾಬಾಲೆ ಬೆದರ್ದು ಪಿತಂಗೆ-" ಬೊಪ್ಪ ! ನೀನೊ

ರೆವಂತೆ ರಿಸಿಗಳಾರುಂ ತನಗೆ ಕಾಣಿಸರ್; ಮಂಗಕೋಡಗ ಮುಸುಡಿನ ವರಾರೊ ಇರ್ವರ್ ತನ್ನಿದಿರ್ಗೆ ನಿಂದಂತೆ ತೋರ್ಪುದು. ಆದೊಡಿವರ ನಡುವೆ ಸರ್ವಾಭರಣಸಂಯುಕ್ತನುಂ, ವಿಶಾಲಾಕ್ಷನುಮಾಜಾನುಬಾಹು ವುಂ, ತುಂಗೋರಸ್ಸ್ಥಲನುಮಪ್ಪ ಷೋಡಶವರ್ಷದ ವರನೊರ್ವನಂ ಕಾಣ್ಬೆಂ. ಅಂತಿರ್ಪನ ಪೀತಾಂಬರಮುಂ, ಶ್ಯಾಮಾಂಗಮುಂ, ಶುಭಗಾ ತ್ರಮುಂ ಮನಂಗೊಳ್ವುದು; ಪದ್ಮಲೋಚನಂಗಳಿನೆನ್ನನೆ ದಿಟ್ಟಿಪಂ; ಮೇಣ್ ನಗುವಂ. ಆಗಳ್ ಕುಂದಕುಟ್ಮಲದಂತಿರ್ಪ ಪಲ್ಗಳ್ ಸ್ಪಷ್ಟಂ ತೋರ್ಪುವು; ಮತ್ತಮಾಪುರುಷಂ ಬಲಗೆಯ್ಯನೆನ್ನ ಕರಮಂ ಪಿಡಿಯ ಲೆಂಬೋಲ್ ಮುಂದೆ ನೀಡಿರ್ಪಂ,'' ಎಂದು ಮಾರ್ನುಡಿದಳ್.

ಬೞಿಯಂ ಬಾಲೆಯ ಭಾಷಣಮಂ ಭಾವಿಸಿ ನಾರದಂ ಕಟ್ಟ ಚ್ಚರಿಯೊಳ್–'' ಎಲೆ ಕನ್ಯಾಮಣಿಯೆ, ಅಂತು ನೀಂ ನೋೞ್ಪವಂಗೆ ತೋಳ್ಗಳೆನಿತಿರ್ಪುವು? ಕಂಡಂತುಸಿರ್ರಾ.'' ಎನಲ್, ''ಎರಡೆ'' ಎಂದಳ್. ಆಗಳ್ಮಗುೞ್ದುಂ,–'' ಆತನ ವಕ್ಷಸ್ಸ್ಥಲದೊಳೇನಂ ಕಂಡಪೆ? ಮತ್ತಂ ಕರದೊಳೇನಂ ಪಿಡಿದಿರ್ಪಂ?'' ಎಂದು ಬೆಸಗೊಂಡೊಡೆ;–'' ವಿಶಾಲವ ಕ್ಷಸ್ಸ್ಥಳದೊಳ್ ದಿವ್ಯಮಾಲಿಕೆಯುಂ ಶುಭಹಸ್ತಂಗಳೊಳ್ ಕಾರ್ಮುಕ ಸಾಯಕಂಗಳು ಮೆಸೆದಿರ್ಪುವು.'' ಎಂದಱಿಪಿದಳ್.

ಶ್ರೀಮತಿಯ ನುಡಿಗಿರ್ವರುಮಚ್ಚರಿವಡುತಾತ್ಮಗತಚಿಂತೆಯೊಳ್ ಬಹುದೂರಂ ಜಾನಿಸಿ–ಮಾಯಿಕಮಿದು, ಮಾಧವನಿನಲ್ಲದೆ ಪೆಱರಿನಾಗ ದೆಂದು, ನಾರದಂ–ಆತನವನಲ್ಲದೊಡೆ ತನ್ನ ಮೊಗಮಿಂತೇಕಾಕೆಗೆ ಕಾಣ ಲಾದುದೆನುತೆ; ಪರ್ವತಂ–ನಾರದನ ಮೊಗಮಂತಿರ್ಪುದು ತಕ್ಕುದು. ಆದೊಡೆನ್ನತೇಕಿಂತು ತೋರ್ಪುದೆನುತೆ; ಇರ್ವರುಂ ನುಡಿಯುತಿರ್ದರ್.

ಇಂತಿರಲಂಬರೀಷನವರ್ಗೆಱಗುತೆ—''ಪೂಜ್ಯರೇ, ಬಗೆಯಾತೆಱ ದೊಳ್ ಮರುಳ್ಗೊಳಲೇಂ ಗೆಯ್ದಿರ್? ಎನ್ನಯ ಕನ್ನೆಯೊಳ್ ಮನಮಿಟ್ಟು ಬಂದಿರ್ಪಿರಾದೊಡೆ ಕೊಂಚಂ ಸ್ವಸ್ಥಮಿರ್ಪುದು. ಪವಣಱಿತು ಪೇೞ್ವೆಂ'' ಎಂದೊಡೆ, ನಸುಮುನಿಸಿಂ—'' ಮರುಳ್ಗೊಳಿಸಿದವರಾವಲ್ತು; ನೀನೇ

ಈಪೆಣ್ಣೆಮ್ಮನೊಲಿಯದೊಲೆಂತೊ ಕಪಟಮಂ ಕುವರಿಗೊರೆದೋ, ನೀನೆಯೋ ಎಸಗಿರ್ಪೆ?'' ಎನುತೆ ಮಱುಮಾತಾಡಿದರ್. ಈ ಬಿರುನುಡಿಯಂ ಲಾಲಿಸುತಾಬಾಲೆ-ಇವರ್ ತಾತಂಗೇನಾನುಂ ಶಾಪಮಿತ್ತಪರೆಂದು ತಳಮಳಂಗೊಂಡು ಮುನ್ನಂ ಕಾಣಿಸಿಕೊಂಡ ದಿವ್ಯಪುರುಷನಂ ಮನದೊಳ್ ಜಾನಿಸಿ, ತವಸಿಗಳೊಳೊರ್ವಂಗೆ ಸರವನಿಕ್ಕುವೆನೆಂದು ಮುಂದಡಿಯಿಟ್ಟಳ್; ದೈವಸಂಕಲ್ಪವನಾರ್ ಮೀರ್ವರ್? ಅಂತವರೊಳೊರ್ವಂಗೆ ಮಾಲೆಯಿಕ್ಕುವೆನೆನುತೆ ಪಜ್ಜೆಯಿಕ್ಕಿದ ಪೆಣ್ ಮಗುಳ್ದಮಾಸುಂದರಮೂರ್ತಿಯಂ ಮೋಹಿಸುತೊಡನಾತಂಗೆಯೆ ಸರಮಂ ಹಾಯ್ಕಿದಳ್. ಅನಿತಱೊಳಚ್ಚರಿಗೆ ತಕ್ಕಂತೆ ಆ ಕನ್ಯೆಯುಂ ಮೇಣಾದಿವ್ಯಪುರುಷನುಂ ಕಾಣಿಸದಾದರ್.

ಚಿತ್ತಯಿಸೈ, ಮುನಿಯೆ, ಆ ಬಾಲೆಯನುಯ್ದವನಾರೆಂದು ಬಲ್ಲೈ? ಸಾಜಮಾದ ಭಗವಂತಂ. ಆತನುಂ ನಿರ್ವ್ಯಾಜಂ ಪಡೆದನಲ್ತು. ಆಪೆಣ್ಗೆಯೆ ಅನಿಶಂ ತಪಮೆಸಗಿ ಪೂರ್ವಸಂಕಲ್ಪಾನುರೂಪಂ ಪೊಂದಿದಂ.

ಇತ್ತಲಿರ್ವರುಂ ದುಃಖಾಕುಲರ್ ವೈಕುಂಠನೊಳೆ ಇಂತೀಪರಿಯಂ ನಿರ್ಧರಿಪುದೆಂದು ಗಕ್ಕನೆ ವೈಕುಂಠಕೆಯ್ತರಲಿತ್ತಲ್ ಶ್ರೀಹರಿ ತಾಂ ಶ್ರೀಮತಿಯಂ ಕುಱಿತು—''ಎಲೆ ಮೋಹನಾಂಗಿ! ನಿನ್ನಿಂ ವಂಚಿತರಾದಾತವಸಿಗಳೀಗಳಿದೆಕೊಳ್ ಬರ್ಪರಿತ್ತಲ್. ಆದುದಱಿಂ ನೀನೆನ್ನಂತರಂಗದೊಳ್ಗುಪ್ತಳಾಗು,'' ಎನೆ; ನಸುನಗುತಂತೆಯೆ ಒಳಪೊಕ್ಕಳ್.

ಸ್ವಮನಂತರದೊಳ್ ನಾರದನುಂ ಪರ್ವತನುಂ ಪುರಾಣಪುರುಷನಂ ಕಂಡೆಱಗುತವನೊಳ್ ಮೊದಲನೆಯಂ—'' ದೇವ, ಇಂದೆಮಗಿರ್ವರ್ಗುಂ ಒಳ್ನುಡಿಯಿನೊಪ್ಪಂಬೂಸಿದೈ! ಇಂತೆಮ್ಮನಟಿಲಿಸಿ ಬಟಿಲಿಸಲ್ಬಹುದೆ? ನಿಶ್ಚಯಂ ನಿನೇ ಆಪೆಣ್ಣಂ ಕಳ್ದು ತಂದವಂ. ಚೀ! ವಿಶ್ವಾಸಘಾತಕಮನಾರ್ಗುಮೆಸಗಬಾರದು. ಸಾಲ್ಗುಂ. ಜೀಯ! ನೀಂ ಪಿರಿಯಂ'' ಎನೆ; ಕಿವಿಮುಚ್ಚಿ ಪುಸಿಮುನಿಸಿಂ—''ಇನ್ನೆಗಂ ನೀಂ ಯೋಗ್ಯನೆಂದೆಣಿಸಿರ್ದೆಂ. ಈಗಳ್ ಸೊರ್ಕಿ ನೀನೆಂತಾನುಂ ಗಟಿಪುವುದಂ ಕಾಣುತೆ ಋಷಿಸ್ವಭಾವಮನೆನಿತುಂ ಲಕ್ಷಿಸೆಂ. ಎಲೆ ಮುನಿಪ! ನೀನುಸಿರ್ವುದು ಸಾಜ

ಮಲ್ಲಂ; ಮೇಣಂತು ಕಾರಣಮುಮಿಲ್ಲಂ;'' ಎಂದು ಸಿರಿಯರಸನೊರೆದಂ. ಅದರ್ಕೆ ನಾರದಂ—'' ಅಂತಾದೊಡೆನ್ನ ಮೊಗಂ ಮಂಗಮುಸುಡಂತೇಕೆ ವಿಕಾರಮಾಯ್ತು ?'' ಎಂದು ಕೇಳೆ; ನಾರಾಯಣಂ—'' ಅಃ ! ಪಲವುಂ ಕಾಲಮೆನ್ನಂ ಭಜಿಸುತಿರ್ದೊಡಂ ನೀನೆನ್ನ ಮೈಮೆಯ ನೆಲೆಯಂಕಂಡುದಿಲ್ಲಂ. ಆಂ ಭಕ್ತಾಧೀನನಪ್ಪೆಂ. ಸರ್ವರುಂ ಸಮಂ.ನೀನೆಂತು ಆ ಪೆಣ್ಣ ಕತದಿಂ ಬೇಡಿದೆ ಅಂತೆ ಈ ಪರ್ವತನುಂ ಕೇಳ್ದಂ. ಆದಱಿಂ ನಿರ್ವಗ್ರ್ಯಮಿಂತಾದುದು. ದೂಱುಗಾರುಮಿಲ್ಲಂ. ಆರ್ ಏಂ ಬೇಡ್ವಿರ ವರ್ಗೆ ಆದನೀವುದೆನ್ನ ಬಿರುದು. ಆಂ ಸತ್ಯಸಂಧಂ. ಸತ್ಯಬಲದಿಂದೆಯೆ ಚಕ್ರಮಿದು ಕೈಸೇರ್ದುದು '' ಎಂದಂ.

ನಾರಾಯಣನಾಜ್ಞೆಯಂ ನಾರದನಾಲಿಸಿ—'' ನಿನ್ನಪ್ಪಣೆಯ ನಿತುಂ ನಿಜಮಾದೊಡಂ ಸ್ವಯಂವರಮಂಡಪದೊಳ್ ಎಮ್ಮೊಳೊರ್ವನ ನಾರಿಸಿಕೊಳೆ ಬಂದಾಬಾಲೆಗೆ ಎಮ್ಮೆಡೆಯೊಳೊರ್ವಂ ಧನುರ್ಬಾಣಂಗಳನಿರ್ಕೆಯ್ಗಳೊಳ್ ಪಿಡಿದಿರ್ದವಂಬಾಲಸುಂದರಂ ಗಡ! ಆರೆಂದಾರ್ಮೈದುದಿಲ್ಲ; ಅಂತುಮವನೆ ಕಳ್ದುಯ್ದುದು ದಿಟಂ.'' ಎಂದು ಪೇೞ್ದಂ.

ಇದರ್ಕೆ ಜನಾರ್ದನಂ—'' ಅಕ್ಕುಂ. ಲೋಕದೊಳ್ ಮಹಾತ್ಮರೆನಿಪರೊಳನೇಕರ್ ಮಾಯಾವಿಗಳೊಳರ್. ಅಂತಪ್ಪವರೊಳಾರೊ ಕನ್ನೆಯಂ ಕಳ್ದುಯ್ದಿರಮೇೞ್ಕುಮಲ್ಲದೆ ಎನ್ನಿನಾದ ಕಜ್ಜಮಲ್ತು. ಏತರ್ಕೆನೆ, ಆನೇಗಳುಂ ಚತುರ್ಭುಜನುಂ, ಚಕ್ರಪಾಣಿಯುಮಾಗಿರ್ಪೆನಲ್ತೆ; ಪುಸಿಯುಸಿರಲ್ ಕಜ್ಜಮಿಲ್ಲ,'' ಎನೆ, ರಿಸಿಗಳಿರ್ವರುಮೊಡಂಬಡುತೆ—'' ನಿನ್ನೊಳಾವ ತೆಱದ ಸಂದೆಯಮುಂ ಕಾಣಿಸದು. ಅವಿವೇಕಿಗಳೆಮ್ಮತ ಪರಾಧಮಿದಂ ಕ್ಷಮಿಸಿ ಕೂರ್ಮೆಯಿಂ ಪೊರೆವುದು.'' ಎಂದೆಱಗಿ ಅಂಬರೀಷನೆ ತಮ್ಮಂ ವಂಚಿಸಿರ್ಪನೆಂದು ಕ್ಷಡಂಗಿ ಮರಳ್ದಯೋಧ್ಯೆಗ ತೆರಳ್ದರ್.

ಭಾರದ್ವಾಜ, ಒಡನೆಯೆ ಮುನಿಗಳಂಬರೀಷನೆಡೆಗೆಯ್ತಂದು ರಾಯನೊಡನೆ ಕೋಪದ ಬಿಂಕದಿಂ ''ಎಲೆಲೆ! ಪಿಡಿ ಪಿಡಿ ಶಾಪಮಂ. ಎಮ್ಮೊಳೊರ್ವಂಗಾಪೆಣ್ಣನೀವೆನೆಂದು ನಂಬಿಸುತೆ ಬರಿಸಿದ ಕತದಿಂ ಮೇಣ್ ನುಡಿ

ಗೆ ಪುಸಿದಟವಟದಿಂದನ್ಯರ್ಗೆ ಕನ್ನೆಯನಿತ್ತೆಮ್ಮನೇಳಿಸಿದ ಕಾರಣದಿಂದೆ ನಿನಗೆ ತಮೋಜ್ಞಮಕ್ಕೆ. ಈ ಯೋಗದಿನಾತ್ಮ ಜ್ಞಾನಂಮಱೆತು ಪೋಕೆ.'' ಎಂದು ಶಪಿಸಿದಾಗಳೇನೊರೆವೆಂ ! ಅಂಧಕಾರದಂತವನಿದಿರ್ಗೆ ತಮೋರಾಶಿಯಾವಿರ್ಭವಿಸಿದುದು. ಎಂತಾದೊಡಂ ಭಗವದ್ಭಕ್ತರ್ಗೆ ಬವಣೆಬರ್ಪುದೆ! ರಥಾಂಗಪ್ರಭಾವದಿಂ ರಾಯಂಗಿನಿಸುಂ ತೊಡರ್ ತೋರ್ದುದಿಲ್ಲಂ. ತಮೋರಾಶಿಯುಂ ಋಷಿಗಳುಮಂ ಬೆಂಬತ್ತಿ ಪೋದುದಾಚಕ್ರಂ. ಇಂತು ಬಹುದೂರಮಟ್ಟುತುಪದ್ರವವನೀಯುತಿರಲವರ್ಗೆ ಪೆಣ್ಣಿನಾಸೆಯುಮಿಲ್ಲಂ ಮಣ್ಣಿನಾಸೆಯುಮಿಲ್ಲಂ; ಮೇಣೊರ್ಮೆ ಸ್ವಾಮಿಯಂ ಕಾಣ್ಬುದೊಂದೆ ಬಯಕೆ ಪಿರಿದಾಯ್ತು. ಅಂತುಮಿಂತುಂ ಮುಂತಿವರುಂ ತಮೋರಾಶಿಯುಂ ಪಿಂತಾಪಾಱುಂಬಳಿಯುಂ ಬರೆ, ಮತ್ತಂ ವಿಷ್ಣುವೆಡೆಗೆ ಬಂದು ಮಣಿದು—'' ಜನಾರ್ದನಾ, ಪದ್ಮನಾಭಾ, ಪುರುಷೋತ್ತಮಾ, ಲೋಕನಾಥಾ, ನೀನೆ ಎಮ್ಮಂ ಕಾವುದು '' ಎಂದರ್. ಭಕ್ತಾಧೀನಂ ತನ್ನೊಳೆ—ಬಲ್ಬಟಿಲ್ದರಿವರೆನ್ನಿಂ; ಅಂಬರೀಷರಾಯನೆಂತಂತಿವರುಂ ಕೇವಲಭಕ್ತರ್; ಇನ್ನುಂ ದಣಿಸಲಾಗದು; ಮುಂತಣಾಟಕಡ್ಡಿಯಕ್ಕುಮೆನುತೆ ಮನಂದಂದು, ಚಕ್ರಬಾಧೆಯಂ ಮೇಣಂಧಕಾರಮಂ ತೊಲಗಿಸಿ, ನಾರದಪರ್ವತರ್ಕಳಂ ಕುಱಿತು—'' ತಾಪಸೋತ್ತಮರಿರಾ, ಪೆಣ್ಗಾಗುತೆ ಸೋಲ್ತಿರೈ; ನಂಬಿದನಂ ಪೊರೆಯಲೆಸಗಿದ ಇಂತಪ್ಪ ಕೃತ್ಯಕೆ ಎನ್ನುಮಂ ಮೇಣ್ ಚಕ್ರಮುಮನೀಗಳ್ ಕ್ಷಮಾಶೀಲರಪ್ಪುದಱಿಂ ಮನ್ನಿಪುದು,'' ಎಂಬುದುಂ; ಉರಿಗಿಚ್ಚಿಗೆ ನೆಯ್ಯೆಱೆಯೆ ಕೆದರ್ವಂತೆ ಕೋಪಂ ಕೆದಱಿ ಎೞ್ದು ನಿಲ್ತಿರ್ವರುಂ—'' ನೀನೇ ಶ್ರೀಮತಿಯಂ ಮಾಯೆಯಿಂ ಕಳ್ದತಂದವಂ, ನಿಜಂ, ಅಕ್ಕೆ; ಆವ ರೂಪದಿನಾಪೆಣ್ಣಂ ಮೋಸದಿಂ ಕೊಂಡುಯ್ದೆಯೊ, ಅಂತೆ ಇತರ್ೞೆಳಂ ತಳೆದು ಆ ಅಂಬರೀಷರಾಜವಂಶದೊಳೆ ದಶರಥಂಗೆ ಪುಟ್ಟು ! ಶ್ರೀಮತಿಯುಂ ಮಗುೞ್ದು ತಿರೆಗೆ ಜನಿಸುಗೆ! ಮಿಥಿಲಾಧಿಪಂ ಜನಕನವಳಂ ಮೇಣ್ ಪೊರೆಗೆ! ಎಂತೆಮ್ಮಂ ವಂಚಿಸಿ ಆಪೆಣ್ಣಂ ಕಳ್ದುಯ್ದೆಯೊ, ಅಂತು ನಿನ್ನ ದ್ವಿತೀಯೆಯನವಳನೊರ್ವ ರಕ್ಕಸಂ ಕೊಂ

ಡುಯ್ಗೆ. ಮೇಣೀಗಳಿವಳ ಸಂಬಂಧದಿನಾಮುಮೆಂತು ದುಗುಡದಿಂ ಬಲಿಲ್ದವದಱಿಂ ಪಿರಿದು ನೀಂ ದುಃಖಂದಾಳ್.'' ಎಂದು ಶಪಿಸಿದರ್. ಭಕ್ತರ ನುಡಿಯೆ ತನ್ನ ನುಡಿಯೆಂಬೊಲ್ ಇಂದಿರೆಯರಸನವರ ಶಾಪಮಂ ಪೊರೆವೆನೆಂದು—'' ಅಕ್ಕುಂ. ನೀಮುಸಿರ್ದಂತೆಯೆ ಅಂಬರೀಷರಾಜವಂಶದೊಳೆ ಯಶಸ್ವಿಯುಂ ಧಾರ್ಮಿಕನುಮಪ್ಪ ದಶರಥಭೂಪಾಲಂಗೆಯೆ ಪಿರಿಯಂ ರಾಮವೆಸರಿಂ ಪುಟ್ಟುವೆಂ. ಆಗಳೀಗಳೀಮಿಕ್ಕಿರ್ದ ತೋಳ್ಗಳೊಳ್ ಬಲದೋಳ್ ಭರತನುಂ ಎಡದೋಳ್ ಶತ್ರುಘ್ನನುಂ ಮೇಣೀ ಶೇಷಂ ಲಕ್ಷ್ಮಣನುಮಾಗೆ ಸೋದರರ್ ಪುಟ್ಟುವರ್. ಎಂದೆಮ್ಮವತಾರಮಪ್ಪುದು ಅಂದು ನೀವೆಮ್ಮಂ ಕಾಣಲಕ್ಕುಂ. ಅಂದು ಪರ್ಯಂತಮಂಬರೀಷನ ನಾಡೊಳಲ್ಲದೆ ಪೆಱತೆಲ್ಲಿಯುಂ ಯಥೇಚ್ಛಮಿರ್ಪುದು. ರಿಸಿಸಾಪಂ ಪುಸಿಯಾಗದು,'' ಎಂದು ಅಂಧಕಾರಮಂ ಮೇಣ್ ಶಾಪಮಂ ತಿಳಿಪಿದಂ. ಆಗಳಾತಮೋರಾಶಿಯುಂ ಋಷಿಶಾಪಮುಮಡಂಗಿದುವು. ಚಕ್ರಮುಂ ಮುನ್ನಮಾರ್ಗಿರ್ದುದವರೊಳ್ ಸೇರ್ದುದು. ಇಂತೀಪರಿಯಂ ಕಾಣುತೆ ಪಿತ್ತಮಿೞಿಯೆ ಮುನಿಗಳಿರ್ವರುಂ ಬೆದರ್ದು—'' ಏತಕರ್ಾ ಪೆಣ್ಣಂ ಬಯಸಿದುದು ; ಒರ್ವಂ ಮೇಣೊರ್ವನಂ ವಂಚಿಸಲೇಕೆಣಿಸಿದುದು ; ಮೇಣಂಬರೀಷಂಗುಂ ಜನಾರ್ದನಂಗುಂ ಶಪಿಸಿದುದೇಕೆ ; '' ಎಂದು ಚಿಂತಿಸುತೆ—'' ಚಿಃ ! ಮುಂದಿಂತಿರಲಾಗದು. ಇಂದು ಮೊದಲ್ಗೊಂಡು ದೇಹಾಂತಪರ್ಯಂತಂ ಕನ್ಯಾಪರಿಗ್ರಹಂಗೆಯ್ವುದಿಲ್ಲಂ. ಈ ನುಡಿಗೆ ಭಗವಂತನೇ ಸಾಕ್ಷಿಯಿರ್ಕೆ!'' ಎಂದು ಪ್ರತಿಜ್ಞೆಗೆಯ್ದು ಮುನ್ನಿನಂತೆ ತಮ್ಮಾಶ್ರಮಂಗಳ್ಗೆ ತಪಮನೆಸಗೆ ಪೋದರ್. ಅಂಬರೀಷರಾಯನುಂ ಬಹುಕಾಲಮರಸುಗೆಯ್ದು ಪುಣ್ಯಾತ್ಮಂ ಪುಣ್ಯಲೋಕಮಂ ಪೊರ್ದಿದಂ. ಕೇಳ್ದೈ ಮುನಿಪ, ಅಂಬರೀಷನ ಮಾನರಕ್ಷಣಾರ್ಥಮುಂ ನಾರದಪರ್ವತರ ಪ್ರತಿಷ್ಠಾರ್ಥಮುಂ ನರರೂಪಮಂ ತಾಳ್ದ ಪರಿಯಂ. ಆಃ ! ಮಾಯೆ ತೋರ್ದುದಱಿಂ ಮಹಾವಿಷ್ಣುವಿಂಗಾದೊಡಂ ಮಾನುಷಜನ್ಮಮಾದುದು

ಗಡ! ಇಂತಿರೆ ಕುಱಿವಾನಿಸರ್ ಕಪಟಮಂಗೆಯ್ದೊಡೆ ಆವ ಜನ್ಮಂ ಬರ್ಕುಂ ಪೇೞ್; ಕಪಟಮಾರ್ಗುಂ ಸಲ್ಲದೈ.

ಎಂಬಲ್ಲಿಗೆ ಅದ್ಭುತರಾಮಾಯಣದೊಳ್
ಚತುರ್ಥಾಶ್ವಾಸಂ ಸಂಪೂರ್ಣಂ.

---

## ಪಂಚಮಾಶ್ವಾಸಂ.

---

ಭಾರದ್ವಾಜ, ರಾಘವಂ ಬಂತಿದೇರಂಗೆ ಪುಟ್ಟಿದ ಪರಿಯನಱಿತ್ತೈ. ಈಗಳಾಸೀತಾಜನ್ಮಕಥನಮಂ ಬಿತ್ತರಿಪೆಂ. ಕಿವಿಗೊಟ್ಟಾಲಿಸಾ.

ಮುನ್ನಮೆರಡನೆಯ ಯುಗದೊಳ್ ಕೌಶಿಕನೆಂಬೊರ್ವವಿಪ್ರನಿರ್ದಂ. ಆತಂ ನಿತ್ಯಂ ಸದಾಚಾರಸಂಪನ್ನಂ, ವಿಷ್ಣುಪರಂ, ಪುಣ್ಯಕ್ಷೇತ್ರಂಗಳಂ ಸಂಚರಿಸುತೆ, ಹರಿಕೀರ್ತನೆಯಂ ಸ್ವರರಾಗತಾಳಲಯಮೂರ್ಛನಾದಿ ವಿಧಿಯಿಂ ಪಾಡುತೆ, ದೈವನ್ಯಸ್ತಭರಂ ತಿರಿಕೂೞಿಂ ಜೀವಿಸುತಿರ್ದಂ.

ಇಂತಿರ್ಪುದುಮೊಂದು ದಿನಮಂತಪ್ಪ ಕ್ಷೇತ್ರಂಗಳೊಳೊಂದಂ ಸಾರ್ದು, ಭಗವಂತನಂ ಪೊಗೞುತುಮಂತೆಯೆ ಗಾಯನಂ ಗೆಯ್ಯುತಿರೆ; ಪದ್ಮಾಕ್ಷನೊರ್ವಂ ಪಾರ್ವಂ ಕ್ಷೇತ್ರವಾಸಿ ಆವನ ದೈವಭಕ್ತಿಗುಂ ಪಾಡಿನ ಜಾಣ್ಮೆಗುಂ ಮೆಚ್ಚುತಾವಗಮುಗಲದೆ ಬೞಿಯೊಳಿರ್ದು, ತಾನುಂ ಭಗವದ್ಭಕ್ತನಪ್ಪುದಱನವನೊಡನೆ ಪಾಡುತುಂ, ಭಿಕ್ಷಾನ್ನಕೆ ಪಡಿಯಾಗಿ ಕೈಯೋಗರವಂ ತಾನೆ ತಂದೀವಂ. ಇಂತಾಗೆ ಬಡಪಾರ್ವನ ಕೌಶಿಕನ ಬವಣೆ ನಿಲ್ತುದು. ಮೇಣೊರ್ವಂ ಮಾಲವವೆಸರ ವಿಷ್ಣುಭಕ್ತಂ ಆಕ್ಷೇತ್ರದ ದೇಗುಲದೊಳ್ ತೂಗುಂಜೊಡರನುರಿಯಿಸುವಂ, ಸೇವಿಸುವಂ. ಈತನ ಪೆಂಡಿತಿ ಮಾಲತಿ ಆಯೆಡೆಯಿಂದೀಯೆಡೆಯಂ ಸಾರಿಸಿ ರಂಗವಲ್ಲಿಯನಿಕ್ಕಿ ಸಿಂಗರಿಸಿ, ಉೞಿದ ಪೊೞ್ತನೊಳ್ ಕೀರ್ತನೆಯಂ ಕೇಳುತೆ ಇರ್ಪಳ್.

ಕ್ಷೇತ್ರಮಿದು ನಾಲ್ದೆಸೆಯೊಳುಂ ಪೆಸರ್ವಡೆಯೆ, ಕುಶಸ್ಥಲಿಯೆ ಮುಂತಪ್ಪ ಪಲವೆಡೆಯ ಯಾತ್ರಿಕರುಂ ಬಂದು ಕೌಶಿಕನನೋಲಗಿಸುತಿರ್ಪರ್.

ಈ ಪರಿಯೊಳ್ ಕೆಲಗಾಲಂ ಪೋಗೆ, ಕೌಶಿಕಮುನಿಗೆ ಬ್ರಹ್ಮಕ್ಷತ್ರ ವೈಶ್ಯರೆಂಬೀ ಮೂಱುಂವರ್ಣಂಗಳೊಳುಂ ಶಿಷ್ಯರನೇಕರೊದವಿದರ್. ಇಂತು ಗಾನವಿಜ್ಞಾನದೊಳ್ ಪ್ರಖ್ಯಾತನಾದ ಕೌಶಿಕನ ಕೀರ್ತಿಯಂ ಕೇಳ್ದೊರ್ಮೆ ಕಳಿಂಗದೇಶಾಧಿಪಂ ಆಯೆಡೆಗೆ ಬಿಜಯಂಗೆಯ್ದು, ಕೌಶಿಕಂಗೆ ಕಾಣಿಸಿಕೊಂಡು, ಸತ್ಕೃತನಿಂತೆಂದಂ :—"ಸುಗುಣರೊಡೆಯ, ನೀಂ ಪಾಡುಂ ಗಾಱಿಕೆಯೊಳ್ ಬಲ್ಲಿದನೆನಿಪ ಜಸಮಂ ಕೇಳ್ದಿಲ್ಲಿಗೆಯ್ತಂದೆಂ. ಆಂ ಕಳಿಂಗ ಪುರದರಸಂ. ನೀನಂತಪ್ಪೊಡಿಂದೆನ್ನಂ ಪೊಗೞ್ದು ಪಾಡುವುದು. ಬೞಿಕಮಾನುಂ ಪಾಡುವೆಂ. ಎಮ್ಮಿರ್ವರ ಪಾಡ ಬಗೆಯನಿವರೆಲ್ಲರ್ ಕಾಣ್ಗೆ." ರಾಯನಿಂತುಸಿರ್ವುದುಂ, ಕೌಶಿಕಂ—"ಮಾರಾಯ, ಎನ್ನ ಜಿಹ್ವಾಗ್ರದೊಳಾವಗಂ ಸರಸತಿಯಿರ್ಪುದಿಲ್ಲಂ. ಮೇಣೋರೊರ್ಮೆ ನೆಲಸಿರ್ದೊಡಂ ಶ್ರೀಹರಿಯಿಂ ಪೆಱತನ್ಯನನಿಂದ್ರನಾದೊಡಂ ಪೊಗೞಲಾಱಳ್." ಎನಲವನ ಶಿಷ್ಯರ್ ಗೌತಮಂ ಆರುಣಿ ಮೇಣ್ ಸಾರಸ್ವತಂ ಮುಂತಪ್ಪರ್ ಆಗುರುವೆಂದ ತತ್ಸ್ವರೂಪಮಂ ಬಿತ್ತರಿಸಿ ಪೇೞ್ದರ್. ಮತ್ತಮವರೊಳ್ ಶ್ರೀಕರನೆಂಬಂ ರಾಯಂಗೆ—"ಪಾರ್ಥಿವಾಗ್ರಣಿಯೆ ! ಎಮ್ಮ ಕಿವಿಗಳ್ ಶ್ರೀಹರಿನಾಮಮಂ ಅಂತಾತನ ಕೀರ್ತಿಯುಮನಲ್ಲದೆ ಪೆಱತೇನುಮಂ ಕೇಳ್ವುದಿಲ್ಲಂ," ಎಂದುಸಿರ್ದಂ. ರಾಯನಿದರ್ಕೆ ಮುನಿಸುಗೊಂಡು ತನ್ನ ಭೃತ್ಯರಪ್ಪ ದ್ವಿಜರೊಳೊರ್ವನಂ ಕರೆದು—"ಎನ್ನಂ ಪೊಗೞ್ದು ಪಾಡ್ಯೈ. ಆಗಳಾದೊಡಂ ತಿರುಕರಿವರ್ ಕೇಳ್ವರೊ ಎಂತೊ ನೋೞ್ಪೆಂ. ಮೇಣೀಸ್ವಾರಸ್ಯಮನಱಿತಾದೊಡಮೆನ್ನ ಜಸಮಂ ಪಾಡುವರೋ ಏಂ? ಎನುತೆ ಕೇಳ್ವೆಂ" ಎಂದು ತಿಳಿಪೆ, ಅವನಂತು ಪಾಡುವುದುಂ, ಶಿಷ್ಯರೆಲ್ಲರ್ ಕೊಡಂಕೆಗಳಂ ಬೆರಲಿಂ ಮುಚ್ಚಿಕೊಂಡರ್. ಕೌಶಿಕನುಂ—ಈಪಾಪಿ ರಾಯನೆಂತಾನುಂ ನಿರ್ಬಂಧಿಸುತೆಮ್ಮಿಂ ತನ್ನಯ ಜಸಮಂ ಪಾಡಿಸದೆ ಬಿಡನೆಂದವನ ಮನೋವೃತ್ತಿಯನಱಿಯುತೆ, ಒಡನೆ

ತಂತಮ್ಮ ತುದಿನಾಲಗೆಯಂ ಕತ್ತರಿಸಿಕೊಂಡರ್. ಮತ್ತಂ ತನ್ನಂ ಗಣಿಸದೆ ಇಂತಪ್ಪ ಕೃತ್ಯಮೆಸಗಿದರಂ ಕಾಣುತ್ತೆ, ಪಿರಿದುಂ ಕನಲ್ದು, ಶಿಷ್ಯರ್ವೆರಸು ಕೌಶಿಕನನಾನಾಡಿಂ ಪೊಱಮಡಿಸುತವರ ವಿತ್ತಮನಪಹರಿಸುತೆ, ಇಂತವರ್ಗೆ ಬಲ್ಬನ್ನಮನಾರಾಯನಿತ್ತಂ. ಸಾಧುಗಳಪ್ಪುದಱಿನನಿತುಂ ಬನ್ನಮಂ ಸೈರಿಸುತೆ, ಎಂದಿನೊಲ್ ಹರಿಕೀರ್ತನೆಯಂ ನೆನೆಯುತೆ, ಉತ್ತರಾಭಿಮುಖಮಾಗಿ ತೆರಳ್ದರ್.

ಬಱಿಕಂ ಪಲಗಾಲದ ಮೇಲಿವರೆಲ್ಲರುಂ ಮೆಯ್ಯೞಿಯೆ, ಯಮಲೋಕಕನಿತಱೊಳ್ ದ್ರುಹಿಣನೆಯ್ತಂದು—ಇವರೆಲ್ಲರ್ ನಿಚ್ಚಂ ವಿಷ್ಣುವಂ ಗಾನಯೋಗದಿಂ ಪೂಜಿಸುತಿರ್ದರ್. ಅದಱಿಂ ದೇವತ್ವಮಂ ಬಯಸುವರೆಂಬಾಗಳಂಬರದತ್ತಣಿನಾರೊ—ಕೌಶಿಕ, ಪದ್ಮಾಕ್ಷ, ಮಾಲತಿ, ಇಂತೆನುತೆ ಪೆಸರ್ವಿಡಿದು ಕರೆದಂತಾಗಲ್, ಅವರೆಲ್ಲರ್ ಕಣ್ಗಾದೃಶ್ಯರಾಗಿ ಸತ್ಯಲೋಕಮಂ ಸಾರ್ದರ್. ಸ್ವಾಗತರಾದ ಕೌಶಿಕಾದ್ಯರಂ ವಿಧಿ ವಿಧಿಯಿಂ ಪೂಜಿಸುತಿರ್ದಂ. ಆಗಳೇನೆಂಬೆಂ! ಮೇಲಣೊಂದು ಕೋಲಾಹಲಂ ಕೇಳಿಸಿದುದು. ಇದನಱಿತು ಹಿರಣ್ಯಗರ್ಭಂ ದೇವತೆಗಳನುೞಿದು ಕೌಶಿಕಾದ್ಯರಂ ಕೂಡುತೆ ವಿಷ್ಣುಲೋಕಕೆಯ್ತಂದಂ.

ಒಳ್ಪಿದನಾಗಿರ್ಪೈ, ಭಾರದ್ವಾಜ, ಆಶ್ವೇತದ್ವೀಪಮಂ ಬಣ್ಣಿಸಲಾರ್ನೆಱೆವರ್? ಸೊನ್ನೆ ಬೆಲೆವಣಿಗಳಲ್ಲದೆ ಪೆಱತಿಲ್ಲಂ; ಓಲಗದೊಂದು ಮಂಡಪದ ಸೊಗಸನಿರ್ದಂತೆ ವರ್ಣಿಸಲ್ ಇರ್ಛಾಸಿರ ನಾಲಗೆಯ ಮಾಸೇಸಂಗುಂ ತೀರದು. ಬಜ್ಜರದ ಸಾಸಿರ ಮೊಗವಾಡಂಗಳಿನೊಪ್ಪುವ ಸಾಹಸ್ರಯೋಜನ ವಿಸ್ತೀರ್ಣ ರತ್ನಮಂಡಪದೊಳ್ ಕಲ್ಯಾಣರೂಪಂ ಕಲ್ಯಾಣಸಿಂಹಾಸನಾಸೀನನಾಗಿರೆ; ಜ್ಞಾನವೃದ್ಧರ್ ಚತುರ್ಭುಜರ್ ವಿಷ್ಣುಚಿಹ್ನಸಮಾಪನ್ನರ್ ಸಾರೂಪ್ಯಪದವಿಗೆಯ್ದಿದ ಅಷ್ಟಾಶೀತಿಸಹಸ್ರಪುಣ್ಯಾತ್ಮರ್ ಸೇವಿಸುತಿರ್ಪರ್; ನಾರದಾದ್ಯರ್ ಪೊಗೞುತಿರ್ಪರ್. ಇಂತು ಮೆರೆದಿರ್ಪ ಭಗವಂತನಂ ಕಾಣುತೆ, ಭಯಭಕ್ತಿಯಿಂ ಕೌಶಿಕಹಿರಣ್ಯಗರ್ಭಾದ್ಯರ್ ದಿಂಡುಗೆಡೆದರ್. ಕಾಲ್ಗೆಱಗಿದನಿಬರಂ ಕಟಾಕ್ಷಿಸಿ

ಕರುಣಾಳು ಕುಳ್ಳಿರಿಸಿ, ಕಡೆಯೊಳ್ ಪೊಂಬಸಿಱನೊಡನೆ—" ಎಲೈ ದೀರ್ಘಾಯುವೆ, ಕೌಶಿಕನಿವಂ ಯತಸ್ವಿಯುಮೆನ್ನ ಭಕ್ತನುಮಪ್ಪಂ. ಎನ್ನನಲ್ಲದನ್ಯರ ಕೀರ್ತಿಯಂ ಕೇಳೆನೆಂದುಂ ಪೇೞೆನೆಂದುಂ ಕಿವಿಯಂ ಮುಚ್ಚಿಕೊಂಡಂ; ಮೇಣ್ ನಾಲಗೆದುದಿಯಂ ಪೋೞ್ದುಕೊಂಡಂ. ಈತಂ ಮಾಲವಂ, ಮೇಣ್ ಇವಳ್ ಮಾಲತಿ, ಇವರೆನ್ನ ಕ್ಷೇತ್ರದೊಳ್ ಸೇವಿಸುತಿರ್ದರ್. ಪದ್ಮಾಕ್ಷಂತಾಂ ಭಕ್ತಂ,ಅನ್ನದಾನಮಂ ಯಥೇಚ್ಛಂಗೆಯ್ದಂ. ಇವರ್ಗೆಲ್ಲಂ ತಕ್ಕ ಗತಿಯಂ ತೋಱುಪೆಂ," ಎನುತೆ, ಕೌಶಿಕಂಗೆ—" ನೀಂ ದಿಗ್ಬಲವೆಸರ ಗಣಾಧಿಪನಾಗುತೆ ಆನೆನಿತು ಕಾಲಮಿರ್ಪೆನನಿತುಂ ಕಾಲಂ ಸೊಗದೊಳಿರ್ಪುದು." ಎಂದು ಸಾಮೀಪ್ಯಪದವಿಯನಿತ್ತು, ಮಾಲತೀಮಾಲವರ್ಗೆ—ದಿವ್ಯಸುಂದರಮೂರ್ತಿಗಳಾಗಾಯನಮಂ ಕೇಳೆ ಲೋಕಮಿರ್ಪನಿತು ಕಾಲಮಿರ್ಪುದೆಂದು ಸಾಲೋಕ್ಯಮಂ ಕರುಣಿಸಿ; ಪದ್ಮಾಕ್ಷಂಗೆ—ಧನಕ್ಕೊಡೆಯಂ ಕುಬೇರನಾಗಿ ಮೆಱೆದಿರ್ಪುದೆಂದು ದಿಗಧೀಶಪದವಿಯಿತ್ತು, ಉೞಿದವರಂ ಯಥೋಚಿತಂ ಮನ್ನಿಸಿ, ಭಕ್ತರಂ ಪೊರೆಯುತಿರ್ದಂ.

ಎಂಬಲ್ಲಿಗೆ ಅದ್ಭುತರಾಮಾಯಣದೊಳ್
ಪಂಚಮಾಶ್ವಾಸಂ ಸಂಪೂರ್ಣಂ.

## ಷಷ್ಠಾಶ್ವಾಸಂ.

ಸಮನಂತರದೊಳ್ ವಿಷ್ಣುಸಾನ್ನಿಧ್ಯಂಬಡೆದ ಕೌಶಿಕನುಕ್ಕೆವದೞ್ತಿಗೆ ವಿಪಂಚೀಗುಣತತ್ತ್ವಜ್ಞರುಂ ವಾದ್ಯವಿದ್ಯಾವಿಶಾರದರುಮಪ್ಪವನ ಶಿಷ್ಯರಾಗಳ್ ಸೂೞೞಿತು ಪಾಡಲ್ ತೊಡಂಗಿದರ್. ಅಂದಮಾಗೆ ಮೆಲ್ಪುವಡೆದ ತನಿಸೊದೆಯ ಸೋನೆವೊಲ್ ಕಿವಿಗಳ್ಗಿನಿದಂ ಕಱೆಯೆ ಪಾಡಿನೊಳ್ಪಂ ಕೇಳ್ದು ಅಗಣಿತಚೇಟಿಯರ್ ನೆರೆದರ್. ಅಂತು ಕಂಬಿಗಳಂ ಪಿಡಿದು ಸಿರಿಯ ಪಡಿಯಱತಿಯರುಂ ಸಿರಿಯರಸನ ಪಡಿವಳರುಮೊದವಿದ ರಾಯೆಡೆಯ ಬಾಗಿಲೊಳ್.

ಅಂತಪ್ಪ ಬಿನದಮಂ ನೋಡೆ,ಅಲರಿಚಂ,ಮುಗಿಲ್ದೇರಂ, ಮುಂತಪ್ಪ ಬಿಡುಗಣ್ಣರುಂ, ನಾರದಾದಿರಿಸಿಗಳುಂ ಸಾರ್ತಂದು ಒಳಗೆ ಪುಗೆ ಗಲಭೆಗೆಯ್ದರ್. ಆಗಳ್ ಬಾಗಿಲವರ್ ತಡೆದು ಪಿಂದಟ್ಟೆ; ನಾಲ್ಮೊಗನಣುಗಂ ಮುಂತೆ ನುರ್ಗಿದಂ. ಪಡಿಯಱತಿಯರಿವನಂ ನೂಂಕಿದರ್. ಮೊಗಮಂ ಕಿಱಿದುಗೆಯ್ದು ಎಲ್ಲರುಂ ಪಿಂಜರಿಯೆ, ಬೊಮ್ಮನವರ್ಗೆ—" ಅಪ್ಪುದಪ್ಪುದು, ಸಾಜಂ; ಅಣ್ಮನಿದಿರ್ಗೆ ಪೋಗಿ ನಿಲಲಾಮೆನಿತರವರ್ ?" ಎಂದು ಸಂತಯಿಸೆ ಸೊರ್ಕುಡುಗಲವರೆಲ್ಲರ್ ಪೊಱವಾಗಿಲೊಳ್ ನಿಲ್ತರ್.

ಅನಿತಱೊಳ್ ತುಂಬುರನೆಯ್ತಂದು ಪೊಱದೆಸೆಯೊಳ್ ದೇವರ ದರ್ಶನಕೆ ಕಾದಿರ್ಪನೆಂಬುದುಂ, ಸಿರಿಯರಸನವನಂ ಮಾನಪೂರ್ವಕಂ ಕರೆಯಿಸಿಕೊಂಡು ಒಱಯೊಳ್ ಕುಳ್ಳಿರಿಸಿ, ಒಱಕಂ ಕೌಶಿಕನ ಸಂತಸಕೆ ಪಾಡಿಸುತೊಲ್ದು ಮನ್ನಿಸಿ, ರತ್ನಾದಿಗಳಂ ಪಾರಿತೋಷಿಕಮನಿತ್ತು ಕಳಿಪ್ಪೆ ತನ್ನೆಡೆಗೆ ಪೊಱಮಟ್ಟಂ. ಮೇಣ್ ಸಗ್ಗಿಗರ ಪಿರಿಯಂ ಮೊದಲಪ್ಪ ಅಗ್ಗಿಮೊಗರುಂ ನಾರದನೊರ್ವನುಱದೆಲ್ಲ ರಿಸಿಗಳುಂ ತಮ್ಮೆಡೆಗೆ ತೆರಳ್ದರ್. ಅಂಚೆದೇರನಣುಗಂ ಸಿರಿಯರಸಂ ತುಂಬುರನನೆ ಆದರಿಸಿ ತನ್ನಂ ಮನ್ನಿಸದಿರ್ದುದಂ ಇನಿಸುಂಬೊಱ್ತು ಜಾನಿಸುತೆ ಬೇಗುದಿಗುದಿದು ತನಗೆ ತಾಂ-"ಸುಡು ತನ್ನೀಬಾೞ್ಕೆಯುಂ. ಅಂತಿರ್ಪ ಮುದಿತುಂಬುರಂಗೆ ಸಮ್ಮಾನಮಪ್ಪೆಡೆಯೊಳೆನಗೆ ದುಮ್ಮಾನಮಾದುದು ಗಡ! ಕಟಕಟಾ! ಸಿರಿಯ ಪಡಿಯಱತಿಯರಿಂ ನೂಂಕಿಸಿಕೊಂಡೀನಾಣಿಲಿ ಮೆಯ್ಯಿರ್ದುಮೇಂ ಫಲಂ! ಆಃ! ವಿಷ್ಣುದೂತರಾತುಂಬುರನಂ ಕೆಯ್ವಿಡಿದು ಕರೆದುಯ್ಯೆ,ಪಿಂಮೆಯ್ಯೊಳೇಂ ನೋಂತನೋ! ಎನುತೆ ಬಲ್ವಗೆಯೊಳ್ ಪಂಬಲಿಸಿ, ಮತ್ತಂ ಕೋಪಕೆ ಮೆಯ್ಯಿತ್ತು—ಆವಳಾಣತಿಯಂತೆ ನಡೆವರಾವಳ ದಾಸಿಯರೆನ್ನಂ ಪೊಯ್ದು ನೂಂಕಿದರೋ, ಆಲಕ್ಷ್ಮಿ ರಕ್ಕಸಿಗೆ ಪುಟ್ಟುಗೆ, ಲೋಗರೇಱಪಂತೆ ಎನ್ನನಟ್ಟಿಸಿದಂತವಳುಮಂ ಪಡೆದಬ್ಬೆಪೆಱಗಟ್ಟುಗೆ," ಎಂದು ಬಿಱುನುಡಿನುಡಿದಂ. ಅಚ್ಚರಿಯೆನುತಚ್ಚರರ್ ಮುಂತಪ್ಪರ್ ಅಱಲಿದರಾಗಳ್; ಮುಪ್ಪೊೞಲುಂ ನಡುಗಿದುದು. ಇಂತೀಪರಿಯನಱಿದು ಲಕ್ಷ್ಮಿವೆರಸು ನಾರಾಯಣಂ

ಮುನಿಯೆಡೆಗೆ ನಡೆತಂದು ತಲೆವಾಗಿ ನಿಂದಿರ್ದಂ. ಮತ್ತಂ ಮಾಲಕುಮಿ ಯವಂಗೆ—'' ಪ್ರಸನ್ನನಾಗ್ಯೆ ಮುನಿಯೆ, ಅಱಿವಿಲ್ಲದಾದ ಕಜ್ಜಕೆ ಮುನಿದು ನೀನೆನ್ನಂ ಸಱಿಸ್ಪೊಡಂ ತೊದಳಾಗದು. ನಿನ್ನೊಳಾನಿಂತು ಬೇಳ್ಪೆಂ. ರಕ್ಕಸಿಯ ಬಸಿಱೊಳೊರ್ಮೊದಲೊಳೆ ಪುಟ್ಟುವುದರ್ಕೆ ಪಡಿ ಯಾಗಿ ಕಾಡೊಳಿರ್ಪ ತವಸಿಗಳ ನೆತ್ತರೊಳಾದೊಡಮಾಗಳ್ ಮಱೆ ಗೊಳ್ವೆಂ. ಅಂತಿರ್ಪ ನೆತ್ತರಂ ಕೊಂಚಂ ಕೊಂಚಂ ಪಿಡಿದು ಕಳಸಂ ತುಂಬ ಲಾವಳ್ ಕುಡಿವಳಾರಕ್ತದಿನಾನುಂ ಪಾವನಮಾಗೆ, ಅವಳ್ಗೆಯೆ ಪುಟ್ಟು ವೆಂ'' ಎಂಬುದುಂ, ಮುಯ್ಯಂ ತೀರಿಸುತೊಡನೆಯೆ ಪಗೆಯುಳಿವ ಕೋ ಟ್ಕಗದಂತೆ ಮುನಿಸಂ ಬಿಸುಟ್ಟು, ಇವಳ ಬಯಕೆಯುಂ ದಾರುಣಮೆನುತೆ, '' ತಥಾಸ್ತು '' ಎಂದಂ.

ಆಗಳ್ ಹೃಷೀಕೇಶನೀತನನಿನ್ನುಂ ತಿರ್ದಿದಲ್ಲದೆ ಪೊರ್ದಗೆಯಾಗ ದೆನುತವಂಗೆ—'' ಮುನಿಪುಂಗವ ! ಕೇಳಾದೊಡೆ ತುಂಬುರನಂ ಮನ್ನಿಸಿ ತನ್ನನೇಱಿಸಿದರೆಂಬ ಬಗೆಯಿಂ ಕನಲ್ದಿಂತುಗೆಯ್ದೆ. ನೀಡುಮೆಣಿಸೆ ನೀಂ ತಪ್ಪಿದವಂ, ದಿಟಂ. ಎಂತೆನೆ:—ಚಾಗ ಭೋಗದೊಳುಂ, ದಾನಮಾನ ದೊಳುಂ, ಧರ್ಮಕರ್ಮದೊಳುಂ, ನಡೆನುಡಿಯೊಳುಂ, ಬಿಜ್ಜೆಬಿನ್ನಣದೊಳುಂ, ತುಂಬುರನತ್ತಣಿಂ ನೀಂ ಪಿರಿಯನೆಂಬುದು ಸಾಜಮಾದೊಡಂ ಅಂತಪ್ಪ ಪೆರ್ಮೆಯಾರ್ಗುಂ ಸಲ್ಲದ್ಯೆ. ಮೇಣಾಂ ಭಕ್ತಿಪೂರ್ವಕಮೆನ್ನನೆ ಪೊಗಳ್ವ ಗಾಯನಕೆ ಸೋಲ್ವನಿತು ಪೂಜೆ ತಪಸ್ಸು ದಾನ ತೀರ್ಥಾಟನಂಗಳ್ಗೆ ಮೆಚ್ಚೆಂ. ಇದಕ್ಕೆ ನಿದರ್ಶನಂ ಕೌಶಿಕನಂತು ತುಂಬುರನುಂ. ಇಂತೀಭೇ ದಮಂ ಲೋಗರಱಿಯಲೆನುತುಂ ತಾನೆಸಗಿದೆನಲ್ಲದೆ ನಿನ್ನಂ ಲೆಕ್ಕಿಸದಲ್ಲಂ. ನೀನಿಂತು ಪರಿಭಾವಿಸದೆ ಸಪಿಸಿದೊಡಂ ಆಂ ಮುನಿವರಲ್ತು; ಎಮ್ಮೀ ಲೀ ಲಾವಿನೋದಕಿದೊಂದು ಸಾಯಮೆ ತೋರ್ದುದ್ಯೆಸೆ, '' ಎನುತೆ ಬುದ್ಧಿ ಯೊರೆದಂ.

ನಾರದನೀನುಡಿಗೇಳ್ದಱಿವು ಪುಟ್ಟೆ, ಒಡೆಯನಡಿಗೆ ತಲೆವಾಗುತಿಂ ತೆಂದಂ:—''ದೇವ! ಅಪರಾಧಿ ತಾಂ ನಿಶ್ಚಯಂ. ಮತಿಹೀನನಾಗಿ ತಾನಂ

ತುಗೆಯ್ದೊಡಂ ಮನ್ನಿಸಿ ಕಾವುದು, 'ತಿರೆಯೊಳ್ ಕಾಲ್ಗೆಡೆ ಬಿೞ್ದೊಡಂ ತಿರೆಯನೇ ಆಧಾರಮಂ ಗೆಯ್ವವೋಲ್' ಎಂಬ ತೆಱದೆ ನಿನ್ನೊಳಾನನ್ನೆಯಂಗೆಯ್ದೊಡಂ ನೀನೇ ಪೊರೆವುದು. ಮತ್ತಂ ತುಂಬುರಕೌಶಿಕರೊಲ್ ಪಾಡುಂಗಾಱಿಕೆಯೊಳಾಂ ಪ್ರತಿಷ್ಠಿತನಪ್ಪಂತೆ ಬಟ್ಟೆದೋಱಿಸೈ.'' ಎನುತೆ ದೈನ್ಯಂಬಿಡಿದು ಬೇಡುವ ಮುನಿಗೆ ಮತ್ತಮೆಂದಂ:—'' ಅಂತು ಮನಮಿರ್ದೊಡೆ ತೋಱಿಪೆಂ. ಉತ್ತರದೆಸೆಗೆ ಮಾನಸಮೆಂಬೊಂದು ಸರಸಿಯುಂಟು. ಅದರ್ಕೆಯುಂ ಮುಂತೆ ಬಡಗಣ್ಗೆ ಇರ್ಪ ಶೈಲದೊಳ್ ಗಾನಬಂಧು ವೆಂಬೊರ್ವನುಲೂಕರಾಜನಿರ್ಪಂ. ಅವಂಗೆ ನೀಂ ಶಿಷ್ಯನಾದೊಡೆ ನೀಂ ತುಂಬುರನಂತೆ ಗಾನವಿದ್ಯಾಪಾರಂಗತನುಂ ಪ್ರತಿಷ್ಠಿತನುಮಪ್ಪಯ್, ಪೋಗು,'' ಎಂಬುದುಂ; ಮನೋವೇಗದಿನಾಯೆಡೆಗೆ ತೆರಳ್ದಂ.

ಅಂತೇರ್ಪಟ್ಟ ತಾಣದೊಳ್ ಗಂಧರ್ವರುಂ, ಕಿನ್ನರರುಂ, ಅಪ್ಸರಸರುಂ ನೆರೆದು ಗಾನಮಂ ಜಾಣ್ಮೆಯಿಂ ಪಾಡುತೆ, ಕೆಲರ್ ಕಲಿಯುತೆ, ಕೆಲರ್ ಕೇಳುತೋಲಗಿಸುತಿರೆ; ಉಲೂಕಂ ವೇದಪಾರಾಯಣಂಗೆಯ್ವ ಸಚ್ಛಿಷ್ಯರಿಂ ಪರಿವೇಷ್ಟಿತನಾದಾಚಾರ್ಯನಂತೆ ಕಣ್ಗೊಳಿಸಿದಂ. ಆಗಳ್ ನಾರದನೆಯ್ತರ್ಪುದಂ ಕಂಡಾಗಾಯನಾಚಾರ್ಯಂ ಶಿಷ್ಯರ್ವೆರಸು ಭಕ್ತಿಮಿಗೆ ಮಣಿದು ಮಣೆಯೊಳ್ಕುಳ್ಳಿರಿಸಿ ಮತ್ತಮಿಂತು ಬೆಸಗೊಂಡಂ:-''ತೇಜಸ್ವಿಯೇ! ನಿನ್ನ ದರ್ಶನದಿಂದೆ ಪಾವನನಾದೆಂ. ಆದೊಡೆ ನಿರ್ನೆರಂ ನೀಂ ಬರ್ಪನಲ್ತು; ಏಂ ಕಾರಣಮಿತ್ತಲ್ಬರವಾದದು? ಎಮ್ಮತ್ತಣಿನಪ್ಪ ಕಜ್ಜಮಾವುದು ಕರುಣಿಪುದು.'' ಅದರ್ಕೆ ನಾರದಂ ಪಡಿನುಡಿಗುಡುತೆ-ನಾರಾಯಣನ ಸನ್ನಿಧಿಯೊಳ್ ತನಗೊದವಿದವಮಾನಮುಮಂ, ತುಂಬುರಂ ಪಡೆದ ಸಮ್ಮಾನಮುಮಂ, ತಾಂ ಸಪಿಸಿದುದಂ, ಮೇಣ್ ತನಗೆ ಹರಿ ಬುದ್ಧಿದಿಳಿಪಿದುದನೆಲ್ಲಮಂ ಪೇೞ್ದು ಮತ್ತಂ, ''ಉಲೂಕಪತಿಯೇ! ವಿಷ್ಣುಮಾಹಾತ್ಮ್ಯಂ ಬಣ್ಣಿಸೆ ತೀರದೈ, ಜಪತಪಂಗಳ್ಗೆ ಮೊಲಿಯದವಂ ತುಂಬುರಕೌಶಿಕರ ಗಾಯನಕೆ ಸೊಲ್ತಿಲಂ ಗಡ! ಸಾಜಂ. ಸಡ್ಡೆಯಿಂ ಪಾಡೆಪಾಡುಮ್ಮೆಮೆಗೆ ಪಾಸಟಿಯಿಲ್ಲಂ,'' ಎಂಬುದುಂ; ಗೂಗೆರಾಯಂ ತನ್ನಿರವು

ಮನಿವಂಗೆ ಪೇೞ್ತೆ, ಪಿರಿದುಂ ನಂಬುಗೆಯಕ್ಕುಮೆನುತೆ ಕರೆದವನಂ ದಣಿವಾಱುವನ್ನೆಗಂ ಎನ್ನಯ ಪರಿಯನುವಂ ಪೇೞ್ವೆನೆಂದು ತೊಡಂಗಿದಂ.

"ಮುನ್ನಮಾಪೊಡವಿಯೊಂದೆಡೆಯೊಳ್ ಭುವನೇಶನೆಂಬೊರ್ವಂ ನಾಡೆಱೆಯಂ ಬಹುಕಾಲಮಾಕಾಲದ ರಾಯರೊಳ್ ಜಸಂಬಡೆದು ಅರಸುಗೆಯ್ಯುತಿರ್ದಂ. ಆತಂ ಸತ್ಪಾತ್ರಂಗಳೊಳ್ ವಸ್ತ್ರದಾನಂ ಸುವರ್ಣದಾನಂ ಕನ್ಯಾದಾನಂ ಗೋಪ್ರದಾನಂ ಮುಂತಪ್ಪ ದಾನಂಗಳಂ ಗೆಯ್ದುದರ್ಕೆ ಮಿತಿಯಿಲ್ಲಂ. ಎನಿತ್ತೋ ದೇಗುಲಂಗಳ್ ನಿರ್ಮಿತಮಾದುವಾದೊಡಂ ಆಯೆಡೆಯೊಳ್ ಹರಿಯಂ ವೇದಮಂತ್ರಂಗಳಿನೆ ತುತಿಸಲ್ತಕ್ಕುದಲ್ಲದೆ ಆರಾನುಂ ಗಾಣಮಂ ಪಾಡಿ ತುೞಿಲ್ಗೆಯ್ಯಲವರ್ ಕೊಲೆಗೆ ಪಕ್ಕಾಗುವರೆಂಬ ಡಂಗುರಮಿರ್ದುದು. ಆದೊಡೆ ಪೆಣ್ಗಳ್ ಮೇಣ್ ತುೞಿಲಾಳ್ಗಳ್ ಅವನ ಜಸಮಂ ಪಾಡುವೆಡೆಯೊಳ್ ನಿರ್ಬಂಧಮಿಲ್ಲಂ. ಇಂತಿರೆ ಹರಿಯ ಕೀರ್ತನೆಗೆಯೆ ತಡೆಯಾದುದು. ಅಂತಿರ಼್ ಪೊಡವಿಯೊಣ್ಮನ ನಾಡೊಳ್ ಹರಿಮಿತ್ರನೆಂಬ ಪ್ರಸಿದ್ಧವೈಷ್ಣವವಿಪ್ರನಿರ್ಪಂ. ಇವನೊರ್ಮೆ ನೆರೆಯೊಳಿರ್ಪ ಪೊಚ್ಚದೆಡೆಯಂ ಸಾರ್ದು ಮಣಲಿಂ ಹರಿಯ ದಿವ್ಯಮೂರ್ತಿಯಂ ಗೆಯ್ದು, ಷೋಡಶೋಪಚಾರಂ ಯುಕ್ತಮಾಗೆ, ಪೂಜಿಸಿ ಮೇಣ್ ರಾಯನ ಕಟ್ಟಾಣತಿಯಂ ಮಱೆದು ಅಂತರಾತ್ಮಂ ಪರಮಾತ್ಮನೊಳ್ ಬೆಱೆವೋಲ್ ವಿಧಿಯಿಂ ಶ್ರೀಹರಿಯ ಗುಣಾನುವಾದಮಂ ಪಾಡುತಿರ್ದಂ. ಅನಿತಱೊಳ್ ರಾಯನಾಳ್ಗಳ್ ಈತೆಱನಂ ಕಾಣುತುಂ ಪೂಜೆಯಂ ಪಾೞ್ಗೆಡಿಸುತವನಂ ಪಿಡಿದು, ಆತಿರೆಯರಸನೆಡೆಗುಯ್ವುದುಮವನವನಂ ವಿಚಾರಿಸುತದರ್ಕೆ ಮುನಿಸುಗೊಂಡು, ಸರ್ವಧನಮನಪಹರಿಸಿ, ತನ್ನ ನಾಡಿಂ ಪಾರ್ವನಂ ಪೊಱಮಡಿಸಿದಂ. ಕೆಲಗಾಲಂ ಪೋಗಲಾರಾಯಂ ಕಾಲಧರ್ಮವನೆಯ್ದೆ ಲೋಕಾಂತರದೊಳುಲೂಕಜನ್ಮಂ ಪ್ರಾಪ್ತಿಯಾದುದು. ಈಪರಿಯೊಳವಂಗೆ ಪಕ್ಕಿಮೆಯ್ ಬರೆ, ಕಂಡ ಕಂಡೆಡೆ ತೊೞಲುತುಂ, ಎಲ್ಲಿಯುಂ ತಿನಿಸುದೊರೆಯದಿರೆ; ಬಲ್ಬುೞಲ್ದು, ಎಂತುಂ ಸೈಸದೆ, ಮೇಣೊಂದು ದಿನಂ ಮುಮ್ಮೆಯ್ಯ ಸೈಪಿನೆಸಕದಿಂ ಜವನ ದರ್ಶನ

ಮಾಗೆ, ತಾನಿಂತು ಬೆಸಗೊಂಡುದು:— ಎಲೈ ಧರ್ಮರೂಪ! ದುರ್ಗತಿಯ ನೆಯ್ದಿದೆನಗೆ ಪಸಿವಿಂ ಬೞಲ್ಕೆಯಿಂತೇಕಾದುದೊ? ಮೇಣುಣಿಸೆನಗಾವೆಡೆ ಯೊಳುಂ ಪುಟ್ಟದಿರಲೇಂ ಕಾರಣಮೊ? ಇಂತೀಜನ್ಮವಾಗಲಾಂ ಮುನ್ನಂ ಗೆಯ್ದುದೇನೊ? ಮುಂತಾದೊಡಮೀಬನ್ನಮಂ ದಾಂಟಿ ಪೋಪುದರ್ಕೆ ಬಟ್ಟೆಯಾವುದೊ? ಪೇೞಿ, ಎಂಬುದುಂ; ಪಕ್ಕಿಯೊಳ್ ದಯೆ ಪುಟ್ಟಿ ಕಾಲಂ—' ಕೇಳ್ವುದು. ಪಿಂತೆ ನೀಂ ರಾಯಂ. ಆಗಳ್ ಗೀತನಾಟ್ಯಲ ಯೋಪೇತಮಾಗಿ ಹರಿಯಂ ನಿಚ್ಚಂ ಪಾಡಿ ತುತಿಪ ಹರಿಮಿತ್ರವೆಸರ ಪಾರ್ವ ನಂ ನಿರ್ನೆರಂ ನಾಡಿಂ ಪೊಱಮಡಿಸುತೆ ತದ್ಧನಮನಪಹರಿಸಿದ ಕತದಿಂ ಮಹಾಪಾತಕಂ ಜನಿಸೆ, ಕ್ಷುದ್ಬಾಧೆಯಿಂತಾದುದು. ಮೇಣ್ ನೀನೆಸಗಿ ದನಿತುಂ ಸೈಪುಂ ಈಯೊಂದೆ ಪಾತಕಕೆ ಬೆದರ್ದು ಪಡಲಿಟ್ಟುದು; ಜನ್ಮ ಮುಮಿಂತಾದುದು. ಆದುದಱಿಂ ಪಕ್ಕಿಯೆ, ನೀಂ ಬಡಗಣ್ಗೆ ಗುಹೆಯ ತ್ತಲ್ ಪೋಗು. ಮತ್ತಂ ಮುನ್ನಿನ ನಿನ್ನೊಡಲಂ ಪಸಿದಾಗಳ್ ನಿಚ್ಚಂ ಬಗಿದು ತಿನುತಿರ್. ಇಂತು ನರಕಯಾತನೆಯಂತೆ ಕಲ್ಪಾಂತರಂ ಕಳಿಯೆ, ತಿರೆಯೊಳ್ ಸೂಣಗನಾಗಿ ಪುಟ್ಟುವೆ. ಆಮೆಯ್ಯೊಳುಂ ಬಹುಕಾಲ ಮಿರ್ದು, ಪಾತಕಂ ಸಮೆಯೆ, ಮತ್ತಂ ನರಜನ್ಮಂ ಬರ್ಪುದು,' ಎಂದು ತಿಳಿಪಿ, ತಾಂ ಕಣ್ಮಱೆಯಾದಂ. ಚಿತ್ತಯಿಸೈ ಮುನಿಯೆ, ಆದುದಱಿಂ ಪೂರ್ವದ ರಾಜನೀಗಳಾಂ ಗೂಗೆಯಾಗಿರ್ಪೆಂ. ಮಾನಸಪರ್ವತಕೆಯ್ತಂದು ದಂಡಧರನೊರೆದಂತೆಸಗೆ, ಸವನಿಸುವನ್ನೆಗಂ ಪಾಡುವಚ್ಚರರುಂ, ಓಲೈಪ ಹರಿದೂತರುಂ, ಸುತ್ತಿರೆ; ಗಾಳಿದೇರೊಳ್ ಬೆಂಗದಿರನಂತೊಪ್ಪಿ ವೈದಿಕ ನೊರ್ವನೆಯ್ತರುತಿರಲ್, ರಾಯನ ಪೆಣದ ಕೆಲದೊಳಿರ್ಪೆನ್ನಂ ದಿಟ್ಟಿಸುತೆ 'ಪಕ್ಕೀ, ಈಪೆಣಂ ಭುವನೇಶವೆಸರರಾಣ್ಮನೊಡಲೆಂದು ತಿಳಿವೆಂ; ಆದೊಡು ಣಲೆಂದೇಂ ನೋಟ್ಪೆ?' ಎನುತೊರೆಯೆ; ಕೆಯ್ಮೋಡಿಸುತೆ, ತನ್ನಿರವಂ ಮೇಣ್ ಜವಂ ಪೇೞ್ದುದಂ ಸವಿಸ್ತರಂ ಐಪ್ರಂಗೆ ಕೇಳಿಸಿದೆಂ. ಆಗಳ್ ಭೂಸುರನೆನ್ನೊಳ್ ಕರುಣಂಬೆತ್ತು, ಇಂತನುಗ್ರಹಿಸಿದಂ:—' ನೀನೆನಗೆ ಗೆಯ್ದ ತಪ್ಪಂ ಮನ್ನಿಸಿರ್ಪೆಂ. ಅಂತದಱಿನಾಪೆಣಂ ಕಾಣದೆ ಪೋಕೆ!

ಪಸಿವುಮಡಸದಿರ್ಕೆ! ಮೇಣ್ ಕಲ್ಪಾಂತರದೊಳ್ ಕುನ್ನಿಯಪ್ಪುದುಮಾಗದು! ಇಂದು ಮೊದಲ್ಗೊಂಡು ಗಾನಯೋಗಂ ಪ್ರಾಪ್ತಿಯಕ್ಕೆ! ಇದಱಿಂ ದೇವವಿದ್ಯಾಧರ ಗಂಧರ್ವಾದಿವರ್ಗಕೆ ಗಾಯನಾಚಾರ್ಯನಾಗು! ಮುಂತೆ ನಿನಗೆ ಲೇಸಪ್ಪುದು' ಎಂದು ದೇವರ್ ಮೆಚ್ಚುವವೊಲ್ ವರಮನಿತ್ತು ಎನ್ನನಿಂತುದ್ಧರಿಸುತುಂ, ತಾಂ ಹರಿಯೆಡೆಗೆ ತೆರಳ್ದಂ. ಇಂತಲ್ತೆ ಸತ್ಪುರುಷರ ಲಕ್ಷಣಂ,'' ಎನುತೆ ಪೂರ್ವೋತ್ತರವೃತ್ತಾಂತಮಂ ತಿಳಿಪಿದಂ.

ಎಂಬಲ್ಲಿಗೆ ಅದ್ಭುತರಾಮಾಯಣದೊಳ್
ಷಷ್ಠಾಶ್ವಾಸಂ, ಸಂಪೂರ್ಣಂ.

---

## ಸಪ್ತಮಾಶ್ವಾಸಂ.

---

ಭಾರದ್ವಾಜ! ಇಂತು ತನ್ನಿರವಂ ಪೇಳ್ದು ಗಾನಬಂಧು ನಾರದಂಗೆ ಮತ್ತಂ—'' ಈ ಕಿನ್ನರರೀವಿದ್ಯಾಧರರೀಯಪ್ಸರರೀಗಂಧರ್ವರೆನ್ನಿಂ ಗಾಣಬಿಜ್ಜೆಯನಱಿಯಲೆನುತೆಯ್ತಂದಿರಲಿವರ್ಗಾನಾಚಾರ್ಯನಾದೆಂ. ಈಬಿಜ್ಜೆ ತಪಕ್ಕುಂ ಶಕ್ತಿಗುಮೊಳಗಲ್ಲಂ. ಆದೊಡೆ ಶ್ರಮದಿನುಂ ಶ್ರದ್ಧೆಯಿನುಂ ಬಹುಕಾಲಕೆ ಪೊಂದಲಕ್ಕುಂ,'' ಎನುತೆ ನುಡಿಯೆ; ನಾರದಂ ತಲೆವಾಗಿ '' ಅಂತೆಯೆ ಅಭ್ಯಾಸಿಪೆಂ,'' ಎಂಬುದುಂ; ವಾಸುದೇವಂಗೆ ಮಣಿದು ಅನುಕ್ರಮದಿಂ ಗಾಣಸಾಸ್ತ್ರಮಂ ಪೇೞಲಾರಂಭಿಸಿದಂ:—

'' ದೇವರ್ಷಿಯೆ! ಗೀತದೊಳುಂ, ಆಹಾರದೊಳುಂ, ಧನಧಾನ್ಯವ್ಯವಹಾರದೊಳುಂ, ಆಯವ್ಯಯದೊಳುಂ, ನಾಣ್ಚಿಕೆಯಾಗದೆಂಬರದು ಕಾರಣದಿನೀಬಿಜ್ಜೆಗೆ ಲಜ್ಜೆ ಸಲ್ಲದೈ. ಮತ್ತಂ ಕುಂಠಿತಮಾಗಿಯುಂ, ಗೂಢಮಾಗಿಯುಂ, ಪಾಡುವುದಾಗದು. ಕೆಯ್ದಿರಿಪಿ, ಕಿಱುವಾಯ್ಗೆಯ್ದು, ಜೋಲ್ಮೊಲಗೆದೋರ್ದು ಪಾಡುವುದುಮೊಳ್ಳಿತಲ್ತು. ತನ್ನ ಮೆಯ್ಯಂ

ತಾಂ ಕಾಣ್ಬುದುಂ, ಬಿಱುದಿಟ್ಟಿಯಿಂ ನೋೞ್ಪುದುಂ, ತೋಳ್ಗಳಂ ಮೇಲೆತ್ತುವುದುಂ, ಆಗಸಮಂ ನೋೞ್ಪುದುಂ ಗಾಯನಕೆ ಸಲ್ಲದು. ನಗೆ, ಬೆದರ್ಕೆ, ಪಸಿವು, ನಡುಕಂ, ದುಗುಡಂ, ಪೆಱತೆಣಿಕೆ, ನೀರೞ್ಕೆ ಇಂತೇೞ್ಬಗೆಗೆ ಪಾಡು ಪಾಡಾಗದು. ಒರ್ಕೆಯ್ಯಿಂ ತಾಳಂದೋರ್ಪು ದುಂ ಕತ್ತಲೆಯೊಳ್ ಪಾಡುವುದುಂ ದೋಷಂ. ಇಂತು ದೋಷಂಗಳಂ ನಿರ್ಣಯಿಸಿ ಪಾಡಲ್ತಕ್ಕುದು.''

ಈತೆಱದೊಳ್ ಗಾನಬಂಧು ಭೇದಾಭೇದಂಗಳಂ ತಿಳಿಪುತಿರೆನಾರ ದಂ ದಿವ್ಯಸಾಹಸ್ರವರ್ಷಪರ್ಯಂತಮಭ್ಯಾಸಿಸುತಿರ್ದು, ಗೀತಪ್ರಸ್ತಾವದೊ ಳುಂ ವೀಣಾದಿವಾದ್ಯದೊಳುಂ ಸಂಪನ್ನನಾಗುತೆ, ೩೬೬೬೦೦ ಲೆಕ್ಕದ ಸರ್ವಭೇದಂಗಳನಱಿತು ನೈಪುಣ್ಯಮಂ ಪಡೆದಂ. ನಾರದಂ ದೇವಾದ್ಯರ್ ಮೆಚ್ಚೆ, ತಾಂ ಗಾನವಿದ್ಯಾಪಾರಂಗತನಾದೆನೆಂದು ಬಗೆದೊರ್ಮೆ ಗಾನ ಬಂಧುವಂ ಕುಱಿತು—'' ಧ್ವಾಂಕ್ಷಶತ್ರುವೇ ! ಎಂತೊ ನಿನ್ನಯ ದಯೆ ಯಿಂ ಗಾಣಬಿಜ್ಜೆಯೊಳಿನಿತು ಬಲ್ಲಿದನಾದೆಂ, ಸಾಲ್ಗುಂ. ಆದೊಡೀಮೇ ಲ್ಗೇಂ ಪಡಿಮೇಲೆನ್ನತ್ತಣಿನಪ್ಪುದಿರ್ಪುದು, ಅಂತದಂ ಸಲಿಸುತೆ, ನಿನ್ನೊ ಲ್ಮೆಯಂ ಪಡೆಯಲ್ತಕ್ಕುದುದಱಿಂ ನಿನ್ನಯ ಬಯಕೆಯಂ ಕೂರ್ಮೆಯಿಂ ಬೆಸಸುವುದು,'' ಎನೆ; ಪಕ್ಷಿರಾಜಂ ಪ್ರಸನ್ನನಾಗುತೆ—'' ತಪಸಿಯೆ, ಪದಿನಾಲ್ಕು ಮನುಗಳ್ ಮುಗಿಯಲ್ ಬ್ರಹ್ಮದೇವಂಗೊಂದು ದಿನಮ ಕ್ಕುಂ. ಆಗಳ್ ಮೂಲೋಕಂ ಸಂಪ್ಲವಮಪ್ಪುದು. ಅಂದುಪರ್ಯಂತಂ ಎನ್ನಯ ಜಸಂ ಪರ್ಬಿರಲೆಂಬುದೊಂದೆಯೆ ಬಯಕೆಯನಲ್ಲದೆ ಪೆಱತೊಂದಂ ಬಗೆಯೆಂ,'' ಎಂದಂ. ಆನುಡಿಗಾಮುನಿಪಂ-'' ಅಂತಪ್ಪುದೇಂ ದೊಡ್ಡಿ ತ್ತೈ? ಸಾಜಮಾಗಿ ಕಲ್ಪಾಂತದೊಳೆ ನೀನೇ ಗರುಡನಪ್ಪೈ. ಅಂದು ಶ್ರೀ ಹರಿಯನುಗ್ರಹಂ ನಿನ್ನೊಳಾಗೆ ಸಾಯುಜ್ಯಪದಂ ದೊರೆಕೊಳ್ವುದು,'' ಎಂದಱಿಪಿ, ಮತ್ತಂ ತಾಂ ಬೀೞ್ಕೊಂಡಂ.

ಬರೆವರೆ ಬಿಜ್ಜೆ ತನ್ನೊಳಗಾದುದೆಂಬ ಪೆರ್ಮೆಯಿಂ ತನ್ನಯ ಜಾಣ್ಮೆಯಿಂ ತುಂಬುರನಂ ಗೆಲ್ದಪೆನೆಂಬ ಮನದಿಂ ನೆಟ್ಟನವನ ಬೀಡಿನೆಡೆ

ಗೆಯ್ತುಂದಂ. ಅಚ್ಚರಿಯೆಟ್ಟುಱಂಗೆ ಕೆಲರ್ಗೆ ಪೆಟಿಗಾಲ್, ಕೆಲರ್ಗೆ ಕುಡು ಗೆಯ್, ಗುಱಗಣ್ ಕೆಲರ್ಗೆ, ಸೆಡೆಮೂಗು ಕೆಲರ್ಗೆ, ಪಲರ್ಗೆ ಬಿರಿದಲೆ, ಸುರಿವಾಯ್ ಪಲರ್ಗೆ, ಏಱದೆಯರೆಬರ್ಗೆ, ಅಲೆಬರ್ಗೆ ಪೇರೊಡಲ್; ಇಂತು ಬಲ್ಬಗೆಯೊಳ್ ವಿಕೃತಾಂಗರಪ್ಪ ಸಾಸಿರಗಟ್ಟಳೆಯಸ್ತ್ರೀಪುರುಷರಾ ತುಂಬುರನ ಮನೆಗಿದಿರೊಳ್ ಬಿೞ್ದೊದ್ದೆದಾಡುವುದಂ ಕಂಡು-ಅವರಾರೆ ನುತವರಂ ಬೆಸಗೊಂಡಂ. ಆದರ್ಕವರ್–"ಕೇಳಣ್ಣ! ಆಮಾದೊಡೆ ರಾಗಂ ಮೇಣ್ ರಾಗಿಣಿಗಳಪ್ಪೆವು. ಎಮ್ಮಾಯವಸ್ಥೆಯಂ ಪೇೞ್ವುದೇಂ? ಪೊಡೆವಿಯೊಳೊರ್ವಂ ನಾರದಂ ಗಾಣಸಾಸ್ತ್ರದ ಬೇರಂ ಪಿಡಿದೆತ್ತಿರ್ಪನೆಂಬ ಪೆರ್ಕಳಿಕೆಯಿಂದೋರೊರ್ವ ಪಾಡುತಿರಲೆಮಗೀಪಾಡಾದುದು. ಎಂತೆನೆ-ಸಾಜಮಾಗಿ ಗಾಯನದೊಳ್ ಜಾಣ್ಮೆಯಿಲ್ಲಮವಂಗೆ. ಆದೊಡಂ ಅಹಂಕಾರಂ ಪಿರಿದಿರ್ಪಿನಂ, ಭಿನ್ನಸಂಧಿಯಿಂ ಪಾಡಲೆಮ್ಮತು ಅಂಗಮಿಂತು ಭಿನ್ನಭಿನ್ನಮಾದುವಕ್ಕಟಾ! ಕಮಲಿನಿ ಬೆಳ್ದಿಂಗಳಿಂ ಬಾಡಿದೊಡಂ ಬಾಲಾತಪದತ್ತಣಿಂ ಮರಲ್ದೊಪ್ಪುವೋಲ್ ಇಂತೆಮಗವನಿನೀಗತಿಯಾದೊಡಂ ಅಭಿಮಾನದಿಂ ತುಂಬುರಂ ಮೇಣ್ ಪಾಡಲೆಮ್ಮ ಭಿನ್ನಾಂಗಂಗಳ್ ಸೊಗಸಾಗಿ ಪುಟ್ಟುವುವು ಎಲ್ಲೈ! ಎಮ್ಮಂ ನೋಯಿಸುವಂ ನಾರದಂ; ಸಲಪುವಂ ತುಂಬುರಂ," ಎಂಬುದುಂ; ಸೊರ್ಕುಮನುೞದು, ದುಗುಡದಿಂ ಪೇೞದೆಯೆ, ಆತಾಣದಿಂ ತೆರಳ್ದಂ.

ಮುನಿಕುಲಲಲಾಮ! ಆಲಿಪುದು. ಮತ್ತಮೊಡನೆ ನಾರದಂಹರಿಯಂ ಕಂಡೀಪರಿಯುನಱವೆನೆನುತೆ, ಶ್ವೇತದ್ವೀಪಕೆಯ್ತುಂದು, ಜನಾರ್ದನಂಗೀವೃತ್ತಾಂತಮುಂ ಪರಿವಿಡಿಯಿಂ ಪೇೞ್ವುದುಂ; ಮಾಧವಂ—"ಸಾಜಂ. ಇನ್ನುಂಗಾನವಿದ್ಯೆಯೊಳ್ ತುಂಬುರಂಗೆ ನೀನೆಣೆಯಾದುದಿಲ್ಲಂ. ಗಾನಬಂಧುವತ್ತಣಿಂ ಬಿಜ್ಜೆ ನಿನಗೆ ಸಂಪೂರ್ಣಂ ದೊರೆತುದಿಲ್ಲಮಾದುದಱಂ ನಿನ್ನಂ ತುಂಬುರಂಗೆ ಪಾಸಟಿಯಾಗೆ ಮುಂತೆ ವೈವಸ್ವತಮನ್ವಂತರದ ಇರ್ಪತ್ತೆಂಟನೆಯ ಯುಗದೆ ದ್ವಾಪರಾಂತ್ಯದೊಳ್ ಯದುಕುಲದೊಳ್ ವಸುದೇವದೇವಕಿಯರ್ಗೆ ಕೃಷ್ಣವೆಸರಿಂ ಅವತರಿಪುದುಂಟು.

ಆಗಳ್ ನೀನೆನ್ನಂ ಕಂಡು, ಈಪರಿಯೆಲ್ಲಮಂ ತಿಳಿಪಲಾಂ ನಿನ್ನಂ ತುಂಬು ರಂಗೆ ಸರಿಮಿಗಿಲೆನೆ ಬಿಜ್ಜೆಯೊಳ್ ಪ್ರವೀಣನಪ್ಪಂತೆ ಕರುಣಿಸುವೆಂ. ಅಂದುಪರ್ಯಂತಂ ಯೋಗಸಾಧನೆಯಂತೆವೋಲ್ ದೇವಗಂಧರ್ವಾದ್ಯರಿಂ ಯಥಾಮತಿ ಗಾನಮನಭ್ಯಾಸಿಸುವುದು,'' ಎನುತೆ ಸೈಪಿಟ್ಟು, ಕಳುಪಿದಂ. ಮತ್ತಮಾನಾರದಂ ನಾರಾಯಣನಾಜ್ಞೆಯಂ ಶಿರದೊಳಾಂತು, ಪೊಱಮಟ್ಟು ಬರುತೊರ್ರೊಂದೆಡೆಯ ಬೀಣೆಬಿನ್ನಣಿಗರೊಡನಭ್ಯಾಸಿಸುತೊರ್ರೊರ್ಮೆ ಅಚ್ಚರರಿನಱಿಯುತೆ, ಮೇಣೊರ್ರೊರ್ಮೆ ದೇವಗಾಯಕರಿಂ ಕೇಳುತೆ, ಪೆಱತೊರ್ರೊರ್ಮೆ ತಾನೆ ಮನದೊಳೆಣಿಸುತೆ, ಬಲ್ಪಗೆಯೊಳ್ ಜತನದಿಂ ಬಿಜ್ಜೆಯೊಳ್ ಪಜ್ಜೆಯಿಡುತಿರ್ದಂ. ಅಂತಿರ್ಪುದುಮೊಂದುದಿನಮವಂ ಸತ್ಯಲೋಕಕೆಯ್ತಂದು ನಾಲ್ಮೊಗನೋಲಗದೆ ಸೇರ್ದುಪಾಡುತಿರೆ; ಅಂಚೆದೇರಂ ಮನಮೆಚ್ಚಿ ಗಾನಯೋಗದೊಳವಂಗೆಣೆ ಇಲ್ಲೆನುತೆ ಪೊಗೞ್ದಂ. ಒಡನೆಯೆ ನಾರದನ ಬಗೆಯೊಳ್ ಅದ್ಭುವೆ ಪೆರ್ಮೆವೆತ್ತು ಮಗುೞ್ದಂ ಬೇರ್ಗೊಂಡುದು. ಆಕ್ಷಣಂ ಬೊಮ್ಮನಿಂ ಸಮ್ಮಾನಂಬಡೆದು, ಕೆಮ್ಮನೆ ತುಂಬರನಂ ಗೆಲೆ ಬಗೆಗೊಂಡು ಬಂದಂ. ಆದೊಡೀ ಬಾಱಿಯುಂ ನಾರದನಂ ಮನ್ನಿಸಿದನಿಲ್ಲಂ. ಈಪರಿಯೊಳ್ ತಿರಸ್ಕೃತನಾದ ನಾರದಂಗೆ ನಾಣ್ಮುಮ್ಮಡಿಯಾಗೆ ಕಿಱುಮನದಿಂ ಪಿಂದಿರುಗುತೆ, ತನ್ನೊಳೆ ತಾನೆಂತಾನುಂ ಸಾಧಿಸದೆ ಬಿಡೆನೆನುತ, ಚಲಂಬಿಡಿದು, ಮುಂತಪ್ಪ ಅವತಾರದ ಪೊೞ್ತಂ ಕಾಯುತಿರ್ದಂ.

ಇತ್ತಲ್ ನಾರಾಯಣಂ ಕಂಸಂ ಮುಂತಪ್ಪ ರಕ್ಕಸರಂ ಮಡುಹಿ, ತಿರೆಯ ತಿಣ್ಣಮಂ ತವಿಸೆ, ಅಗ್ಗಿವೊಗರ ದೂಱಿಂಗೆ ದ್ವಾರಕೆಯೊಳ್ ದೇವಕಿಯ ಬಸಿಱೊಳ್ ಕೃಷ್ಣವೆಸರಿಂ ಮೆಯ್ಗೊಂಡು ಪುಟ್ಟಿ ಬಳೆಯುತಿರ್ದಂ. ಅಂತಿರ್ಪುದುಂ ಪಿಂತೆ ನುಡಿಯಿತ್ತುದಂ ನೆನೆದು, ನಾರದಂ ಹರಿಹರಿಯೆನುತೆ ಕೃಷ್ಣನೆಡೆಗೆಯ್ತಂದೆಱಗಿ, ಮುನ್ನಿನಿರವನೆೞ್ಚಱಿಸಿದಂ. ಆಗಳ್ ಮಾಧವಂ ನಸುನಗುತೆ ಎಣ್ಬರ್ ಪೆಂಡಿರೊಳ್ ಮೊದಲ್ ಜಾಂಬವತಿಯಂ ಕರೆದು–'' ಎಲೆ ಪೆಣ್ಮಣಿಯೇ! ಈ ಮುನಿಪಂ ಗಾನವಿದ್ಯಾರ್ಥಿ

ಯಾಗಿ ಬಂದಿರ್ಪಂ. ಇವಂಗೆ ನೀಂ ಬಲ್ಲನಿತು ಪೇೞಿ,'' ಎನೆ; ಮುಗು
ಳ್ನಗೆಗೊಂಡು ತಕ್ಕಂತೆ ಬಿತ್ತರಿಸಿದಳ್. ಈಸಂದರ್ಭದೊಳೊರ್ಕಾಲಂ
ಸಮೆಯೆ; ನಾರದಂಗೆ ಮೇಣ್ ಬಿಜ್ಜೆಯಂ ಪೇೞೆ ಸತ್ಯಭಾಮೆಯಂ
ಗೊತ್ತುಗೆಯ್ದಂ. ಅಲ್ಲಿಯುಂ ವರ್ಷಮೊಂದಂ ಕಳೆಯೆ, ಮೂಱನೆಯ
ಸೂೞ್ ರುಕ್ಮಿಣಿಯ ಎಡೆಗಟ್ಟುವುದುಂ; ಆಗಳ್ ಪುಚ್ಚವಣಮಾಗೆ
ನೆರೆದ ಪಡಿಯಱತಿಯರ್-ಇವಂಗಿನ್ನೆವರಂ ಸ್ವರಜ್ಞಾನಮೇ ಪುಟ್ಟಿತಿಲ್ಲ
ಮೆಂದು ತಳ್ಳಿದರ್. ಅಂತುಮಿಂತುಮಾತಾಣದೊಳನೊರ್ಕಾಲಂ ಪೋ
ದುದು. ಆದೊಡಮಾರುಮೆರ್ದೆಗೊಂಡರಿಲ್ಲಂ. ಇಂತು ಸಾಸಂಗೆಯ್ದೊ
ಡಂ ಬಿಜ್ಜೆ ಸೇರ್ದುದಿಲ್ಲೆಂಬ ನಂಬುಗೆ ತನ್ನಿಂ ತಾನೆ ತಲೆದೋಱೆ,
ನಾರದಂಗೆ ತುಂಬುರನಂ ಗೆಲ್ವುದೆಂಬ ಏಱುಂಮನಮಿೞಿದುದು. ಸೊ
ರ್ಕು ಸಿರ್ಕುಗೊಂಡುದು; ಪೆರ್ಮೆ ಪೆಱಸಾರ್ದುದು; ಹರಿಯಂ ಮೆಚ್ಚಿಪ
ಬಗೆಯೊಂದೆಯೆ ಮಿಗಿಲಾದುದು. ಇಂತೀಪರಿಯಱಿತು ಅಮೇಯಂ
ಕೃಷ್ಣಂ ತಾನೆ ಗಾನಯೋಗಮನಱುಪೆ ನೆರವಾದಂ. ಈ ಪೊಸಗುರುವ
ತ್ತಣಿಂ ಬಿಜ್ಜೆಗೇಳೆ, ನಾರದಂಗೆ ಕರತಲಾಮಲಕದಂತೆ ಸಮಸ್ತಂ ಹೃದ
ಯಂಗಮಮಾಗುತುಂ ಬ್ರಹ್ಮಾನಂದಂ ಪುಟ್ಟೆ ನಾಟ್ಯವಾಡಿದಂ. ನಾರ
ದನ ದಿಟಮನಮನಾಜನಾರ್ದನಂ ಬಗೆಗೊಂಡು-'' ನೀನೀಗಳ್ ತುಂಬು
ರಂಗೆ ಸರಿಪಾಟಿಯಾದ್ಯೆ,'' ಎಂದಮರ್ದುನುಡಿಯಿಂ ಪರಸಿದಂ.

ಬಲ್ಲೈ ಭಾರದ್ವಾಜ! ಗಾನಯೋಗದಾದ್ಯಂತಮುಂ ಅಹಂಕೃತಿ
ಗೊಡವರ್ಪುದಲ್ಲಂ; ಮಚ್ಚರಕೆ ಬೆಚ್ಚಿ ಬರ್ಪುದಲ್ಲಂ; ಬಿಱುಮನದಿಂ ಪಲ
ಕಾಲಂ ಸಾಧಿಸಿದೊಡಂ ಸರಿಗೊಳ್ವುದಲ್ತು; ಭಗೀರಥಪ್ರಯತ್ನಕವೊಳ
ಗಾಗದು: ಮತ್ತಮೇಂ, ಹರಿಯ ಕೂರ್ಮೆಗಡಲೊಡೆದೊರ್ಮೆಯೆ ಮೇ
ಲ್ವಾಯ್ದೊಡೈಸೆ! ಆದುದಱಿಂ ಲೋಗರ್ ಪರಮೇಶನಂ ಕಟ್ಟುಂಬಗೆಯಿಂ
ಪಿಡಿದು, ಅಱುವಗೆಯಂ ತೊಱೆದು ಹರಿಯೊಳಿರೆ ಮನಂಗೊಂಡಿರಲ್
ನಾರದಂಗೆ ಗಾನಯೋಗಮೊಡನೆ ಸವನಿಸಿದಂತೆ, ಸರ್ವಂ ಸಮನಿಕುಂ
ಕಣಾ! ಮತ್ತಮಾನಾರದಂ ಹರಿಯೊಲ್ಮೆಯಿನೆ ತುಂಬುರಂಗೆಣೆಯೆನಿಸುತೆ

ಅಂದಂದಿಂಗುಂ ತ್ರಿಲೋಕದೊಳಂ ತ್ರಿಮೂರ್ತಿಗಳೊಳಂ ಸಮ್ಮಣಂಬಡೆ ದಿರ್ಪಂ.

ಎಂಬಲ್ಲಿಗೆ ಅದ್ಭುತರಾಮಾಯಣದೊಳ್,
ಸಪ್ತಮಾಶ್ವಾಸಂ, ಸಂಪೂರ್ಣಂ.

## ಅಷ್ಟಮಾಶ್ವಾಸಂ.

ವಿಪ್ರೋತ್ತಮನೆ! ಕೇಳ್. ನಾರದನ ಶಾಪಕೆಂತಾಮಾಲಕುಮಿ ಮುನಿಗಳ ರಕ್ತದಿಂ ರಕ್ಕಸಿಯ ಬಸಿಱೊಳಾದಳ್, ಮೇಣವಳೀತಿರೆಯ ಣುಗೆಯಾದಳಾಬಗೆಯನೀಗಳ್ ಪೇೞ್ವೆಂ. ಎಂತೆನೆ:—

ಈಜಂಬೂದ್ವೀಪಕೆ ತೆಂಕಲ್ಗೆ ಲಂಕೆಯೊಂಬೊಂದು ದೀವಿಯಿರ್ಕುಂ. ಅದಕೊಡೆಯಂ ರಕ್ಕಸರೊಳ್ ಸಂದ ಈರೈಮೊಗಂ ರಾವಣಂ. ಒರ್ಮೆ ತನಗೆ ಮುಪ್ಪೊಡಲೊಡೆತನಮುಂ ಬರ್ಪಂತೆ ಮೇಣ್ ಮುದಿವ ಸಾವುಂ ಬಾರದಂತೆ ವಿಧಿಯಂ ಒಲಿಸಿಕೊಳ್ವುದೆಂದು ಬಗೆದಂದು, ಪುಣ್ಯ ಭೂಮಿಯೊಳ್ ಪಿರಿದುಂ ಕಾಲಂ ತಪಂಗೆಯ್ಯುತಿರೆ; ತತ್ತಪಃಪ್ರಭಾವದಿಂ ಮೂಲೋಕಮುರಿಗೊಂಡುದು. ಇಂತಿದನಱಿತು ಬ್ರಹ್ಮಂ ತಾನಸುರೇಂದ್ರಂಗೆ ಪ್ರತ್ಯಕ್ಷನಾಗುತಿಂತೆಂದಂ:—"ಪೌಲಸ್ತ್ಯ! ಆಲಿಸು, ಬಲ್ದಣಿದೆ. ಇಂದು ಮೊದಲ್ಗೊಂಡು ತಪಸಂ ತವಿಸ್ಸೈ. ಈಯುಗ್ರತಪಸಿನತ್ತಣಿಂ ಲೋಕಂ ಬೇವುದು; ಅದಱಿಂ ಬೇಡುವುದು ಮನದಿರವಂ, ಕರುಣಿಪೆಂ," ಎಂಬುದುಂ; ಕೈಕಸಿಯಣುಗಂ ಕಣ್ದೆತ್ತಿ ಕಮಲಾಸನಂಗೆ ಕಾಲ್ಗೆಱಗಿ ಕೆಯ್ಮೋಡಿಸಿ ಕಡೆಗೆಂದಂ:–"ದೇವ, ನೀನೆ ಮಾದೇವಂ ನೀನೆ ಮಾಧವಂ, ದಿಟಂ. ಏಗಳ್ ನೀಂ ಮೈದೋರ್ದೆಯೋ, ಆಗಳೆ ಎನ್ನ ಕಾಮಿತಮೆಲ್ಲಂ ಕೈಗೂಡಿದತ್ತಾದೊಡಂ ಬಾಯ್ವಿಟ್ಟು ಬೇೞ್ಪೆನೊಂದಂ. ಏನೆನೆ:–ಸವಾ ಮರತ್ವಮಂ ನೀಂ ದಯೆಗೆಯ್ವುದು," ಎಂಬುದುಂ; ದ್ರುಹಿಣಂ

ನಿರಾಕರಿಸಿ–" ಪೆಱತೊಂದನೇನಾನು ಮಿಕ್ಕುಪುದು " ಎಂದಂ. ಅದರ್ಕೆ ದಶಾಸ್ಯಂ ಎಣಿಕೆಯಿಂ–" ಸಗ್ಗಿಗರ ಪಿರಿಯ! ಎಮ್ಮವರುಂ, ನಿಮ್ಮವರುಂ, ಯಕ್ಷರುಂ, ನಾಗರುಂ, ಗಂಧರ್ವರುಂ, ಪಿಶಾಚರುಂ ತನ್ನಂ ಕೊಲಲ್ಕಾಗದು. ಮತ್ತಂ ಎಂದೆನ್ನ ಮಗಳನೆ ದುರ್ಮತಿಯಿಂ ಬಯಸುವೆನೆಂದು ಮಿಳ್ತುವೆನ್ನಂ ಮುಟ್ಟುಗೆ. ಇಂತಾದೊಡಂ ವರಮನೀವುದು " ಎನೆ— " ಅಪ್ಪುದು " ಎಂದು ತಿಳಿಪಿ, ಪಿತಾಮಹಂ ಪೋದಂ.

ಓರಂತೆ ರಾವಣನುಂ ತನಗಾರುಂ ಮುಪ್ಪೊೞಲೊಳುಂ ಎಣೆವಾರರೆನುತೆ ದರ್ಪದಿಂ ದಿಗ್ವಿಜಯಾರ್ಥಂ ಪೊಱಮಟ್ಟಂ. ಏನೊರೆವೆನೀರಕ್ಕಸನ ಬೀರಮಂ! ಸಗ್ಗಮಂ ಸಾರ್ದು ಮುಗಿಲ್ದೇರನನಟ್ಟಿ, ಬರ್ದಿಲರಂ ಸೋಲಿಸಿ, ಕನ್ನೆವೆಣ್ಗಳಂ ಸೆಱೆವಿಡಿವಂ. ಓರೊಂದೆಡೆಯೊಳ್ ಅಚ್ಚರಿಯರ ನೊಚ್ಚತಂ ಕೊಂಡುಯ್ವಂ. ಮೇಣೊರ್ಮೆ ಕೀೞೆಳೆಗೆ ದಾೞಿಯಿಡುತೆ ಪಾಯ್ದು ವಾಸೇಸನ ಬಂಡಾರಮನಪಹರಿಸಿ, ನಾಗಕನ್ನೆಯರಂ ಪಿಡಿದು ತರ್ಪಂ. ಎಣ್ದೆಸೆಯಾಣ್ಮರಂ ಗದ್ದಿಸುವಂ. ಆಂ ಪೇೞೆನವನುಪಟಳಮಂ. ಇಂತಾಗೆ ಲೋಕದೊಳಿರ್ಪ ದ್ರವ್ಯಮೆ ಅವನ ಬೊಕ್ಕಸಂ; ದೆಸೆಯಾಣ್ಮರೆ ಊೞಿಗದವರ್; ದೇವಗಂಧರ್ವಸ್ತ್ರೀಯರೆ ದಾಸಿಯರ್; ಮನಂಗೊಂಡ ಪೆಣ್ಗಳೆ ಪೆಂಡಿರ್; ಲೋಕಮೆ ಅವನ ರಾಜ್ಯಮಾಗೆ ಪೆಱತೇಂ ಪೇೞ್ವುದೈ! ಈ ತೆಱದಿರಲೊಂದಾನೊಂದು ದಿನಮಾಖಳಂ ದಂಡಕವನಕೆಯ್ತಂದು, ಆ ತಾಣದ ರಿಸಿಗಳಂ ದಿಟ್ಟಿಸಿ, ಬಗೆಯೊಳ್–ಈ ಮುದಿವಾರ್ವರಂ ಗೆಲ್ಲದಿರಲಾಸೀಮುಪ್ಪೊೞಲೊಡೆಯನಾಗಿಯುಮಲ್ತು ; ಮೇಣಿಂತಿವರನೞಿಸಿದೊಡಂ ಜಸಂ ಬರ್ಪುದಿಲ್ಲಂ; ಆದುದಱಿನೆಂತಾನುಂ ಗೆಲ್ಮೆಗೆಯ್ಮೆಯಂ ಕಾಣ್ಬುದು, ಎಂದು ಬಗೆದು, ಆ ಮುನಿಗಳನೆಲ್ಲರಂ ಪಿಡಿತಂದವರ್ಗೆ–ತಾಂ ದಿಗ್ವಿಜಯಾರ್ಥಂ ಬಂದಿರ್ಪೆನೆಂದುಂ, ಅದಕೋಸುಗಂ ಜಯಲಾಭಾರ್ಥಂನೆತ್ತರಂ ಕುಡುವೆಡೆಯೊಳ್ ನೆತ್ತರ್ವನಿಯನಾನುಂ ಕುಡವೇೞ್ಕುಂ ಅಲ್ಲದೊಡೆ ನೆತ್ತರನೇ ಕೊಳ್ವೆನೆಂದುಂ ತಿಳಿಪಿದಂ. ಆಗಳವರ್ ನಿರ್ಬಂಧದಿನೊಪ್ಪೆ; ದುರಾತ್ಮನವರೊಳೋರೊರ್ವನ ಮೆಯ್ಯುಚುರ್ಚಿತೋರೊರ್ವನ

ಕೆನ್ನೀರನೊಟ್ಟಿಸಿ; ಗೃತ್ಸಮದನೆಂಬೊರ್ವಂ ತನಗೆ ಸಹಸ್ರಪುತ್ರರಿರ್ದೊಡಂ, ಮಗಳ ಬಯಕೆಯಿಂ ಸಿರಿಯೆ ಅಣುಗಿಯಾಗಿ ಪುಟ್ಟಲ್ವೇೞ್ಕುಮೆಂದು ದಿನದಿನಂ ಪತ್ನಿವೆರಸು ವಿಧಿಪೂರ್ವಕಮಿಟ್ಟು, ಕುಶಾಗ್ರದಿಂ ಪಾಲೆಱೆದು ಪೂಜಿಪ ಪೊಂಗಳಸದೊಳ್ ಈತನೞಿಯದವೋಲ್ ತುಂಬಿಸುತೆ; ಗೆಲ್ಲದ ಗುಱುತೆಂದು ಸಂತಸದಿಂ ತನ್ನ ಲಂಕೆಯತ್ತಲ್ ಕೊಂಡುಯ್ದಂ.

ಅಂತು ತನ್ನ ಬೀಡಿಂಗೆಯ್ತಂದು, ಪಟ್ಟಮಹಿಷಿಯಪ್ಪ ಮಂಡೋದರಿಯಂ ಕರೆದು—'' ಎಲೆ ಮಡದಿ, ಇದೆಕೊಳ್ ಕೊಡಂ. ರಿಸಿಗಳ ನಂಜುನೆತ್ತರಿಂ ತುಂಬಿರ್ಕುಂ. ಮೂಜಗಮಂ ಗೆಲ್ದ ಗುಱುತಿಂಗೆಂದು ತಂದಿರ್ಪೆಂ. ಜೋಕೆಗೆಯ್ವುದು. ತುಡುಗುಗೊಂಡು ಕುಡಿಯದಿರ್. ಮೇಣಾರ್ಗುಮೊರೆಯದಿರ್ '' ಎಂದೆಚ್ಚಱಿಸುತೆ, ಆಕೆಯ ಕೆಯ್ಯೊಳಿತ್ತು, ತಾನೆಂದಿನಂತೆ ಲಂಪಟತ್ವದಿಂ ಪೊಱಮಟ್ಟು, ಮಂದರಂ ಮುಂತಪ್ಪ ಬೆಟ್ಟುಗಳೆಡೆಯೊಳ್ ದೇವಗಂಧರ್ವಾದಿನಾರಿಯರೊಡನೆ ವಿಹರಿಸುತಿರ್ದಂ.

ಮುನಿಕುಲಲಲಾಮ ! ಕೆಲಗಾಲಮೀತೆಱಿಂ ಪೋಗೆ; ರಕ್ಕಸನ ಈನಡತೆ ಮಂಡೋದರಿಗೆ ಸೊಗಯಿಸಿತಿಲ್ಲಂ. ಎಱೆಯನಾವಗಂ ಪೆಱವೆಣ್ಗಳೊಳೆ ಎಱಕಂಗೊಂಡು ತನ್ನಂ ಕಾಣನೆಂಬ ಪುರುಡಿಂ ನಿಚ್ಚಂ ಬೇಗುದಿಗೊಂಡು ತನಗೆ ತಾಂ–ಛಿಃ! ಸುಡು, ಪೆಣ್ಣೀಬಾೞ್ಕೆಯುಂ. ಅಂ ಕೈದಾರೆಯ ಪೆಂಡಿತಿಯಿರಲ್, ಓಪಂ ಪರನಾರಿಯರೊಳಾಗಳುಂ ಮೆಱೆಯುತಿರ್ಪುದೆನೆ ತಾನಿರ್ದುಂ ಪಾಡೇ ! ಲೋಗರ ನಿಂದೆಗೆಡೆಯಾಗೆನೆ! ಬಱಿಗುಮೊಂದು ಕುಂದಲ್ತೇ ! ಇರ್ಕೆ. ಮುಂತೆ ಗತಿಗಾರುಂ ಬೇಡವೇ ! ಪೆಱವೆಣ್ಗಳಣುಗರ್ಗೆಯೆ ಪಟ್ಟಂಗಟ್ಟುವನೇ! ಅಕ್ಕಟಾ! ಇನಿತೆಲ್ಲಮಂ ಬರ್ದುಂಕಿದಾನೆಂತು ಕಂಡು ಸೈರಿಪೆಂ! ಆಕ್ಕೆ. ಇದರ್ಕೆ ಮರ್ದಱಿವೆನೆನುತೆ, ಮುನ್ನಂ ರಾವಣಂ ತಂದಿತ್ತ ರುಧಿರಮಂ ನಂಜುನೆತ್ತರೆನುತೆಯೆ ಬಗೆದು, ಕುಡಿದಳ್. ಕೆಂಡಗಿರ್ಚನಿಡೆ ಮನೆ ಸುಡುಗುಮೆಂದು ಖಂಡಮಾಣಿಕ್ಯಮನಿಡೆ .ಸುಡುಗುಮೆ ? ನಂಜಾದೊಡಲ್ತೆ ಸಾವುದು, ಅಮರ್ದಾ

ದೊಡೇಂ ? ಬಱಿಕಮಾಕಾಂತೆಯೊಳಾನೆತ್ತರೆ ಬಿತ್ತಾಗೆ, ಬಸಿಱ್ ಕಡಂ ದುಱುಗೂಡಿನೋಲ್ ದಿನಕ್ರಮದಿಂ ಬಳೆಯುತಿರ್ದುದು. ಇಂತಿರೆ, ಮಂದೋದರಿಗೆ ದುಗುಡಮೆಣ್ಮಡಿಯಾಗೆ—ಪತಿಯೆನ್ನನೇಳಿಸಿದನೆಂದಿಂತೆ ಸಗೆ, ಲೋಗರುಮೇಳಿಸುವುದಾಯ್ತು ಗಡ ! ಬಾವಟಿದು ಬಲ್ವಿಣ್ಣಾದುದು. ಅಃ ! ನಾಣಿಲಿ ಜೀವಮಿನ್ನುಂ ಪೋಗದು; ಏವೆಂ ?-ಎಂದು ಪರಿಪರಿ ಯೋಚಿಸಿ, ಮತ್ತಮಾಹದಿಬದೆ, ದೇವರಿಜ್ಜೆಯನಾರ್ ವಿಾಱಲಾರ್ಪರೆನುತೆ, ತನಗೆ ತಾಂ ಸಂತೈಸಿಕೊಂಡೊಡನೆ ವಿಮಾನಮನೇರ್ದು, ಯಾತ್ರಾರ್ಥಂ ಪೋಱಮಟ್ಟಳ್. ಬರೆವರೆ, ಮುಂತೆ ಕುರುಕ್ಷೇತ್ರದೊಳ್ ರತಿಯತ್ತಣಿಂ ನಾಲ್ಮಡಿ ಸೊಬಗಿನ ಪೆಣ್ಗೂಸಂ ಪಡೆವುದುಂ; ಕಲ್ಮನಂಗೊಂಡು ಕೂಸಂ ಪೇಟಿಗೆಯೊಳ್ ಕ್ಷೇತ್ರದೊಳ್ ನೆಲದೊಳ್ ಬಯ್ತಿಟ್ಟು, ಎಂತಾನುಂ ಮುಂತಣ ಅಪವಾದಂ ತಪ್ಪಿತೆಂದು ನಿಜಪುರಿಗೆ ತಿರುಗಿದಳ್.

ಬಹುದಿನಮಿಂತು ಕಳೆಯಲೊಂದುದಿನಂ ಮಿಥಿಲೆಗೊಡೆಯಂ ಜನಕನೆಂಬೊರ್ವಂ ರಾಜರ್ಷಿ ತಾನಾಕ್ಷೇತ್ರಕೆಯ್ತಂದು ಜನ್ನಮಂ ಗೆಯ್ಯಲೆಂದು ನೆಲನಂ ಶೋಧಿಸುತಿರೆ; ಪುಣ್ಯಾದಿನೀಪೇಳಿಗೆ ದೊರೆಯೆ; ಬಾಯ್ದೆಱೆಯಲಚ್ಚರಿಗೆ; ಜೀವಂಗೊಂಡ ಚಿತ್ರಪುತ್ತಳಿಯಂತೆ ರಂಜಿಪೀಬಾಲೆಯಂ ಕಂಡಂ. ಒಡನೆಯೆ ಗಗನದತ್ತಣಿಂ ಪೂಮಳೆ ಆವಳ ಮೇಲೆ ಕಱೆದುದು. ಮೇಣ್—"ಎಲೈ ರಾಯ, ಪೆಱತೆಣ್ಣದಿರ್. ಇವಳ್ ಸಾಕ್ಷಾಲ್ಲಕ್ಷ್ಮಿ, ಪುಣ್ಯವಿಶೇಷದಿಂ ದೊರೆಕೊಂಡಳ್. ಇವಳಂ ಮನೆಗುಯ್ದು ಮಗಳೆಂದೆ ಪಾಲಿಸು" ಎಂದು ಬಾನ್ನುಡಿಯೊಂದಾದುದು.

ಬಱಿಕಮಾರಾಯಂ ಸಂತಸಂಗೊಂಡು ಮನೆಗುಯ್ದು, ನೇಗಿಲಿನೆಱ್ದು ಬಂದುದಱಿಂ ಸೀತೆಯೆಂಬ ಪೆಸರಿಟ್ಟು, ಕರುಣೆಯಿಂ ಪಾಲಿಸುತೆ, ಕೈಕೊಂಡ ಜನ್ನಮಂ ಪೂರೈಸಿ, ಸಪ್ತಾಂಗದೊಳ್ ರಾಜ್ಯಮುಮಂ ಕಾಣುತೆ, ಸದಾ ಸಂತೋಷದೊಳಿರ್ದಂ.

ಎಂಬಲ್ಲಿಗೆ ಅದ್ಭುತರಾಮಾಯಣದೊಳ್

ಅಷ್ಟಮಾಶ್ವಾಸಂ, ಸಂಪೂರ್ಣಂ.

# ನವಮಾಶ್ವಾಸಂ.

ಈಗಳ್ ನಿನಗೆ ಸೀತಾರಾಮರ್ಕಳ ಪುಟ್ಟು ಪಟ್ಟಾದುದೆ? ಶಿಷ್ಯೋತ್ತಮನೆ! ಮುಂತಣ ಕತೆಯನಿನ್ನೊರೆವೆಂ, ಕೇಳ್. ಕಾಲಾನುಕೂಲಮಿವರ್ಗೆ ಪರಿಣಯಂ ಸಿರಿದೆನೆ ಮಿಥಿಲೆಯೊಳ್ ನಡೆದುದು. ಜನಕಮಾರಾಯನಳಿಯಂಗುಡುಗೊಱೆಯಂ ಮಗಳ್ಗೆ ಬಱುವಱೆಯಂ ಸರ್ವರ್ ಮೆಚ್ಚಲಿತ್ತು ದಿಬ್ಬಣವಂ ಕಳಿಪಿದಂ.

ಇಂತು ಶ್ರೀರಾಘವಂ ಸೀತಾಸಮೇತಂ ನಿಜಪುರಿಗೆ ದಿಬ್ಬಣಂ ತೆರಳ್ದುವರ್; ಸುತಿ, ಮೌರಿ, ಡೋಲು, ತಂಬಟೆ, ಈರಣ, ಢಕ್ಕೆ, ಪರಿಗೆ, ಕೊಂಬು, ಕಾಳೆ, ಜೇಗಟೆ, ಮದ್ದಳೆ ಮುಂತಪ್ಪ ಬದ್ದವಣಂಗಳ ಬಿರುಸರಂ ಎಲ್ಲೆಡೆಯೊಳಂ, ಕಡಲ್ಗೆ ಪೆರ್ಮೊರೆಯೆನೆ, ಎಣ್ದೆಸೆಗೆ ಗಜದ ಬೃಂಹಿತಮೆನೆ, ಆಗಸಕೆ ಮೊಱಗೆನೆ, ಮಾರ್ದನಿಗುಟ್ಟಿದುದು.

ಒಡನೀಪರಿಯಱಿತು ಆರ್ಚೀಕನಣುಗಂ ಪರಶುರಾಮಂ ಬಿಲ್ಗಣೆಗಳಂ ಪಿಡಿದು ಬಂದು, ಅವರನಡ್ಡಂಗಟ್ಟಿದಂ. ಆಗಳ್ ದಶರಥರಾಮಂ ಪರಶುರಾಮನೊಡನೆ—"ಸ್ವಾಗತಮೆ! ನಿನ್ನಯ ದರ್ಶನದಿಂ ಪಾವನರಾದೆವಾಂ. ಈಗಳೆಮಗೆ ಗೋಚರಿಸಲೇನಾನುಂ ಕಾರಣಮಿರಲಾಕಜ್ಜಮಂ ಪೇೞ್ವುದು" ಎಂಬುದುಂ; ಕೊಡಲಿಯವಂ ದರ್ಪದಿಂ—"ಪೇೞ್ತೇಂ, ಕ್ಷತ್ರಿಯ! ಇದೆಕೊಳ್, ಕ್ಷತ್ರಕಾಲವೆಸರ ಬಿಲ್. ಇದರ್ಕೆ ಪೆದೆಯೇಱಿಸಲಾರ್ಪೊಡೆ ಕಾಣ್ಬುದು" ಎಂದಂ. ರಾಘವಂ ಪಡಿನುಡಿಯೊಳ್ ಭಕ್ತಿಯಿಂ–ಬಟ್ಟೆಯೊಳ್ ತಡೆವುದು ನ್ಯಾಯಮಲ್ಲೆಂದುಂ, ಕ್ಷತ್ರಿಯರ್ಗೆ ದಿಮ್ಮಿದರೊಳ್ ಪೋರ್ಕೆ ಸಲ್ಲದೆಂದುಂ, ಮೇಣ್ ಅದಱೊಳುಂ ಇಕ್ಷ್ವಾಕುಕುಲದವರ್ಗೆಮಗೆ ದೋಸಂ ತಟ್ಟುವುದೆಂದುಂ ಪೇೞೆ, ರೇಣುಕಾತ್ಮಜಂ–"ಎಲೈ ರಾಘವ! ನುಡಿಬಿನ್ನಣಂ ಸಾಲ್ಗುಂ. ಪಿಡಿ ಎನ್ನೀಕೋಯಂಡಮಂ" ಎಂದು ಮಗುೞ್ದುಂ ಗದ್ದಿಸಿದಂ. ಉತ್ತರಕ್ಷಣದೊಳೆ ದಶರಥ

ರಾಮಂ ಬಿಲ್ಲಂ ಕೊಂಡು ಲೀಲೆಯೆನೆ ಪೆದೆಯಂ ಕೊಪ್ಪಿಗೇಱಿಸಿ, ಟಂಕಾ ರಂಗೆಯ್ಯೆ ; ಭಾರ್ಗವನಚ್ಚರಿಯಾಗೆ ; ಲೋಕಂ ಕಡೆಗಾಲದ ಸಿಡಿಲ್ದನಿಗೆ ತ್ತುತಲ್ಲಣಂಗೊಂಡುದು. ಮತ್ತಂ ಶ್ರೀರಘುರಾಮಂ ಭೃಗುರಾಮಂಗೆ- "ವಿಪ್ರಾಗ್ರಣಿಯೇ ! ಪೇೞ್ದಂತೆಸಗಿದೆಂ. ಇನ್ನೇಂ ಮನದ ಬಯಕೆ ? ಕರುಣಿಪುದು" ಎಂಬುದುಂ; ಪೆರ್ಮೆಯಿಂ—"ಅಂತಾದೊಡೆ ಆನೀವ ಕೋಲಂ ಬಿಲ್ಗೆ ಜೋಡಿಸುತೆ ಆಕರ್ಣಾಂತಂ ಸೆಳೆದಿಸುವುದು" ಎಂದು ಒಂದು ಬಾಣಮನೀಯಲ್ಪೋದಂ. ಆಗಳ್ ಸೀತಾರಾಮಂ ನಸುಮುನಿ ಸಿಂದಿಂತೆಂದಂ—"ಕೇಳ್, ನಿನ್ನಯ ನುಡಿಗೆ ರೋಸಂ ಪುಟ್ಟುವುದಾ ದೊಡಂ ಒರ್ಮೆಗೆ ಮನ್ನಿಪೆಂ. ಆದೊಡೆ ನೀಂ ದರ್ಪಿಷ್ಟಂ. ಬೊಮ್ಮ ನೊಲ್ಮೆಯಿಂ ರಾಜನ್ಯರಂ ಗೆಲ್ದೆನೆಂಬ ಹಮ್ಮನುೞಿ. ಆನಾರೆಂದು ಬಲ್ಲೈ? ನಿಜರೂಪಮಂ ತೋಱುವೆಂ. ಅಂತು ನೋಡೆ ದಿವ್ಯದೃಷ್ಟಿ ಯುಮನೀವೆಂ," ಎನುತೆ ಪೇೞಿಲೊಡನೆಯೆ, ಭಾರ್ಗವಂಗೆ ಪೊಸನೋ ಟಂ ಪುಟ್ಟಿದುದು.

ಮುನಿಕುಲೋತ್ತಮ! ಅನಂತರಂ ಪರಶುರಾಮನೇಂ ಕಾಣ್ಬಂ ? ದ್ವಾದಶಾದಿತ್ಯರುಂ, ಏಕಾದಶರುದ್ರರುಂ, ದಶಯೋಗಿಣಿಯರುಂ, ನವ ಗ್ರಹಂಗಳುಂ, ಅಷ್ಟವಸುಗಳುಂ, ಸಪ್ತಶರಧಿಗಳುಂ, ಷಟ್ಶಾಸ್ತ್ರಂಗಳುಂ, ಪಂಚತತ್ತ್ವಂಗಳುಂ, ಚತುರ್ವೇದಂಗಳುಂ, ತ್ರಿಮೂರ್ತಿಗಳುಂ, ದ್ವಿಜಾ ತಿಗಳುಂ, ಏಕರೂಪನೊಳ್ ತೋರ್ದುವು. ಇಂತೀವಿಶ್ವರೂಪಮಂ ಕಣ್ದಣಿಯೆ ಕಾಣ್ಬನ್ನೆಗಂ ; ವಿಶ್ವರೂಪಂ ಭಾರ್ಗವನಿತ್ತಬಾಣಮಂ ಸೆಳೆದೆಸೆ ದೊಡೆ, ಕಣೆ ಅವಂಗೆ ತಗಲ್ದು ಮೂರ್ಛೆವೋದಂ. ಅಂತುಮಿಂತು ತೆಪ್ಪತ್ತು ನೋೞ್ಪುದಂ ನಿಸ್ತೇಜಮಾಗಿ ಒಂದು ವರ್ಷಮಂತೆಯೆ ಇರ್ದಂ. ಸೊರ್ಕುಡುಗಿ ದುಃಖಿಪ ಪರಶುರಾಮಂ ಪಿಂತೆ ಸತ್ಯಯುಗದೊಳ್ ಅಜ್ಜಂ ಭೃಗುಋುಷಿ ತಾಂ ತಪಂಗೆಯ್ದ ವಧೂಸರಮೆಂಬ ಪುಣ್ಯಾನದೀ ತೀರಕೆಯ್ದಿ, ನಿಶ್ಚಲಭಕ್ತಿಯೊಳ್ ತಪಮನೆಸಗುತೆ, ಮುನ್ನಿನೋಲ್ ತೇಜಸ್ವಿಯಾಗಿರ್ದಂ ಕೇಳ್ಕೆ.

ಇತ್ತಲ್ ರಾಘವಂ ಸರ್ವರೊಡನೆ ಪುರಜನರ್ ಪೊಗೞೆ ಸುಖದೊಳಗಯೋಧ್ಯೆಗೆಯ್ತಂದಂ.

ಎಂಬಲ್ಲಿಗೆ ಅದ್ಭುತರಾಮಾಯಣದೊಳ್
ನವಮಾಶ್ವಾಸಂ, ಸಂಪೂರ್ಣಂ.

---

## ದಶಮಾಶ್ವಾಸಂ.

---

ಇಂತೀಪರಿಯೊಳ್ ರಘುಪುಂಗವನಯೋಧ್ಯೆಯೊಳಿರ್ಪುದುಂ; ದಿನಗತಿಯೊಳಿಂತಾನುಮೊಂದು ಹೇತುವಿಂ ಈರೇೞ್ಗಲಂ ವನವಾಸಂ ಪ್ರಾಪ್ತಿಯಾಗೆ; ಸೀತಾಲಕ್ಷ್ಮಣಸಮೇತಂ ದಂಡಕಾರಣ್ಯದತ್ತಲ್ ಪೋೞಮಟ್ಟಂ. ಆಲಿಸೈ, ಈತೆಱದ ಬನ್ನಮೊದವಿದೊಡಂ ಮನಂಗುಂದಿದನೇ ! ಅಲ್ಲಿ ಗೋದಾವರೀತೀರದೊಳಿಲೆ ವನೆಗೆಯ್ದು ಕಾಡೇ ನಾಡಾಗೆ, ಎಲೆವನೆಯರಮನೆಯಾಗೆ, ಸಂತಸದೊಳಿರ್ದಂ. ಲಕ್ಷ್ಮಣನಣ್ಣನನ್ನೈಯ್ಯನಂತೆ, ಸೀತೆಯಂ ಮಾತೆಯಂತೆ ಭಾವಿಸಿ ನಿಚ್ಚಂ ಸೇವಿಸುತಿರ್ಪಂ. ಸೀತೆಯುಂ ಪತಿಯೆ ಗತಿಯೆಂದು ಬಗೆದಾವಗಂ ಪೂಜಿಸುತಿರ್ಪಳ್. ಇಹಗಿಹಗೆ ರಾಘವಂಗೆ ಸೀತೆಯೊಳ್ ಪ್ರೀತಿಯುಂ ಲಕ್ಷ್ಮಣನೊಳ್ ಕಾರುಣ್ಯಮುಂ, ಸೀತೆಗೆ ಪತಿಯೊಳ್ ಭಕ್ತಿಯುಂ ಮೈದುನನೊಳ್ ದಯೆಯುಂ, ಲಕ್ಷ್ಮಣಂಗೆ ಅಣ್ಣನೊಳ್ ವಿಶ್ವಾಸಮುಂ ಅತ್ತಿಗೆಯೊಳ್ ವಿನಯಮುಂ ಅನ್ಯೋನ್ಯಮಾಗಿರ್ದುವು. ರಾಘವನೋರೊರ್ಮೆ ಮಡದಿಗೆ ವನದಿರವಂ ಬಿತ್ತರಿಪಂ; ಕಣ್ಗೆದಿರೊಳ್ ಬರ್ಪ ಬಗೆಬಗೆಯ ಮಿಗಂಗಳಂ ಬಣ್ಣಿಪಂ; ಪಲವಣ್ಣದ ಪಕ್ಕಿಗಳಂ ತೋಱಿಪಂ; ಪೂವಳ್ಳಿಗಳ ಪೆಸರನೊರೆವಂ. ಸೀತೆ ಪತಿ ಬೇಂಟೆಯಾಡಿ ಬರೆ ಕೆಯ್ಯ ಬಿಲ್ಲಂ ಕೊಂಡಿಟ್ಟು, ಆಸನಮನಿತ್ತುಪಚರಿಸುವಳ್. ಮೇಣ್ ಲಕ್ಷ್ಮಣಂ ಪಣ್ಗಳಂ ತಿಱಿತಂದು, ಇವರ್ಗಮರ್ಪಿಸಿ, ತಾನಿರುಳೊಳವರ್ಗೆ ಕಾವಲಾಗಿರ್ಪಂ.

ಈಪರಿಯೊಳಿವರ್ ಪುರದೊಳೆಂತಂತೆ ಸೊಗದೊಳಿರ್ಪುದುಂ; ಕೆಲ ಗಾಲಂ ಪೋಗೆ, ದುಷ್ಟರಕ್ಕಸಂ ರಾವಣಂ ಗಂಡಸರ್ ಪೋಱಗಿರ್ಪ ಪೊಲ್ತಿಂ ಕಾದು, ಕವರ್ತೆಯೊಳ್ ಪರ್ಣಶಾಲೆಯಿಂ ಸೀತೆಯಂ ಕಳ್ದು ಲಂಕೆಯತ್ತಲ್ ಕೊಂಡುಯ್ದಂ.

ಇತ್ತಲ್ ರಾಮಲಕ್ಷ್ಮಣರ್ ಬೇಂಟೆಯಾಡಿ ಮರಳ್ದೆಲೆವನೆಗೆ ಬಂದು ನೋಡೆ, ಸೀತೆ ತೋರ್ದುದಿಲ್ಲಂ. ಒಡನೆ ಕಣ್ಗಲ್ತಲೆ ಬಂದು ಮೂರ್ಛೆವೋಗಲಿರ್ವರುಂ; ಮೊದಲ್ ಚೇತನಂಗೊಂಡೆಲ್ದ ಲಕ್ಷ್ಮಣನ ಶೈತ್ಯೋಪಚಾರದಿಂ ರಾಘವಂ ಧಾತುಗೊಂಡರೆಗಳಿಗೆ ಪರ್ಯಂತಂ ಮೋನಮಿರ್ದು, ಮೇಣ್ ತಾಂ ತಮಗೆ ದಿಟಂಗೆಯ್ದು ಪುಡುಕಲ್ ಪೊಱಮಟ್ಟರ್. ಇಂತು ಪೊಱಮಟ್ಟು ಪೞುವೊಳ್ ಪುಡುಕಿ, ಕಣಿಯೊಳ್ ಕಂಡು, ಕೊಳಮಂ ಕಲಂಕಿ, ಅಡವಿಯೆಲ್ಲಮನಱಿಸಿದೊಡಮರಸಿ ಮಱೆಸಿ ಪೋಗೆ; ಪೋಗಿ, ಕಂಡ ಕಂಡೆಡೆಯೊಳ್ ಕಂಡ ಕಂಡವರಂ ಬೆಸಗೊಂಡೊಡಂ, ಆರುಂಸದುತ್ತರಮಿತ್ತರಿಲ್ಲಂ. ಕೇಳ್ವೈ, ಮುನಿಪ, ಎಂತೆಂತು ಮಡದಿಯ ವಾರ್ತೆ ಪುಟ್ಟಿತಿಲ್ಲಮಂತಂತು ಮೋಹಮಿರ್ಮಡಿಸೆ; ವನಮನೆಲ್ಲಮಂ ಸೀತೆಗೆತ್ತು ಪೂಗೊಂಚಲಂ, ಬಳ್ಳಿಯುಂ, ಪಣ್ಣಂ ಎಣ್ಣದೆ ಪಿಡಿವಂ, ಅಪ್ಪುವಂ, ಮುದ್ದಿಪಂ. ಈತನ್ನ ಮರುಳ್ತನಂ ತನಗೆಯೆ ಅಱಿವಾಗೆ ನಾಣ್ಚುವಂ. ಎಂತಾದೊಡಂ ಸೀತೆಯ ಸುೞಿವು ಕಾಣದಿರೆ, ಎರ್ದೆಗುಂದಿ ಪೆಣ್ಣಂ ಪೆಣ್ಣಿನ ಗುಣಮಂ ನೆನೆನೆನೆದು ಬಾಯ್ವಿಟ್ಟಱಲ್ ತೊಡಂಗಿದಂ. ಇಂತು ಮಱುಗುವಾತನ ಕಣ್ಣೀರೆ ಪೊಚ್ಚಮಾಗೆಪರಿದುದು. ಮೇಣ್ ಕಣ್ಬುಳುಂಕೆ ಬೆಟ್ಟವಾದುದು. ಏನಾದೊಡಮಾರಾರೇವರ್?

ರಾಮಲಕ್ಷ್ಮಣರಿರ್ವರುಂ ಬಲ್ದುಗುಡದಿಂ ಮುಂತೆಮುಂತೆ ಋಶ್ಯಮೂಕಪರ್ವತನಿಕಟಪ್ರಾಂತದೊಳ್ ಬರೆವರೆ; ಆಬೆಟ್ಟನೊಡೆಯಂ ಸುಗ್ರೀವನೆಂಬೊರ್ವಂ ಗುರುವಾನರಂ ಇವರಂ ಇವರ ಠೀವಿಯನಿವರ್ಪಿಡಿದ ಬಿಲ್ಗಣೆಗಳ ಬಲ್ಪಂ ದೂರದೆ ಕಂಡು, ಕಟ್ಟೆಚ್ಚಱಿಯಿಂ ತಾಂ ತನ್ನ ಬೞಿಯುವರೊಳಿಂತೆಂದಂ;—"ನೋೞಿಪ್ಪುದು: ಬಟ್ಟೆವಿಡಿದೆಯ್ತರ್ಪಾಕಿಱುಜೌವ

ನಿಗರಂ. ನಡೆವ ಭಂಗಿಯಂ ನೋಡೆ ತಿರುಕುಳಿಗಳಂತೆಯುಂ, ಪಿಡಿವ ಧನುರ್ಬಾಣಂಗಳಂ ನೋಡೆ ಕ್ಷತ್ರಿಯರಂತುಂ, ಬಿಡುವ ಸೊಬಗಂ ನೋಡೆ ಅಮರ್ದುಣಿಗಳಂತುಂ ತೋರ್ಪರ್, ಆರಪ್ಪರಿವರ್ ? ಏಂ ಪಗೆಯಣ್ಣಂ ವಾಲಿಗೆ ನೆರವಾಂತೆಮ್ಮೊಳ್ ಪೋಣಖಲ್ ಬಂದರೆಯೆ ? ಅಲ್ಲದೊಡೇಂಕಜ್ಜಂ? ಆರಾದೊಡಮವರನಾರೆಂದಾರಯ್ದು ಬರ್ಪಿರೆ?''

ಆಗಳಾತನಾಪ್ತರೊಳಾಂಜನೇಯಂ ಅಣ್ಮನಾಣೆಯನಾಂತಾವೀರರ್ಕಳಾರೆಂದಾರಯ್ಯೆ ಪೋದಂ. ಮತ್ತಾ ಹನುಮಂತನವರ್ಗೆ ಕಾಣಿಸಿಕೊಂಡು-" ನೀವಾರ್ ? '' ಎಂಬುದುಂ, ರಾಘವಂ ಮುನ್ನಂ ಭಾರ್ಗವಂಗೆಂತಂತೆ ನಿಜರೂಪುದೋಱಿದಂ. ಕ್ರಮದಿಂ ಶಂಖಚಕ್ರಗದಾಪದ್ಮಂಗಳಿಂ ಶೋಭಿಪ ನಾಲ್ಗೆಯ್ಗಳುಂ, ತೊಳಚಿ ಪೂದೆಂಡೆಯಿಂ ಮೆಱೆವ ಕೊರಲುಂ, ಸಿರಿವಜ್ಜ ಲಜ್ಜಣದಿನೊಪ್ಪುವೆರ್ದೆಯುಂ, ಬೆಳ್ವಟ್ಟೆಬಿಗಿದ ನಡುವುಮಿಂಬಾಗೆ ; ಎಡಬಲದೊಳ್ ಚೌರಿಯಂ ಬೀಸುವ ಲಕ್ಷ್ಮೀಸರಸ್ವತಿಯರುಂ, ಇದಿರೊಳ್ ತುತಿಸುವ ಸನಕಸನಂದನಾದ್ಯರುಂ, ಸುತ್ತಮಿರ್ದು ಸೇವಿಪ ಸಿದ್ಧವಿದ್ಯಾಧರಗಂಧರ್ವಾದ್ಯರುಂ, ಮನಂಗೊಳೆ; ಶುಭಗಾತ್ರನಪ್ಪ ಪರಮಾತ್ಮನಂ, ಮೇಣ್ ಸಾಸಿರ ಪೆಡೆಗಳಂ ರಾಘವನ ಮೇಲೆ ಸತ್ತಿಗೆಯೊಲೆತ್ತಿ ನಾಗರ್ಕಳಿಂ ಸುನ್ನತಿಗೊಳ್ವ ಮಾಸೇಸನಂ ಕಾಣ್ಬುದುಂ; ಅಚ್ಚರಿಗಚ್ಚರಿದೋಱೆ; ತನಗೆ ಕಾಣಿಸಿದ ಬ್ರಹ್ಮಾಂಡನಾಯಕನಂ ಬಲ್ವಗೆಯೊಳ್ ಪೊಗೞ್ದು, ಆನಂದಾಬ್ಧಿಯೊಳ್ ಮುೞುಂಗಿ, ವಿಶ್ವಮೂರ್ತಿಯಿಂ ತತ್ತ್ವೋಪದೇಶಮಂ ಕೊಂಡು ನಲಿದಾಡುತಿರ್ದಂ.

ಎಂಬಲ್ಲಿಗೆ ಅದ್ಭುತರಾಮಾಯಣದೊಳ್

ದಶಮಾಶ್ವಾಸಂ, ಸಂಪೂರ್ಣಂ.

# ಏಕಾದಶಾಶ್ವಾಸಂ.

---

ಶ್ರೀರಾಮಚಂದ್ರಮಂ ಮಾನುಷಮಾತ್ರನಾಗಿ ಹನುಮನೊಡನಿಂತೆಂದಂ—"ಕೇಳ್ವುದು, ತಿರೆಯೊಳ್ ನೆಗೞ್ತೆವಡೆದ ಅಯೋಧ್ಯೆಯೆಂಬ ಪೊೞಲೊಡೆಯನಪ್ಪ ಬಂತಿದೇರ್ಗಂಗೆ ಅಣುಗರಾಂ. ಎಂತಾನುಮೊಂದು ಕಾರಣದಿಂ ಈಯಡವಿಗೆಯ್ತರೆ ಎನ್ನಾಪೆಣ್ಡತಿಯಂ ಜಾನಕಿಯಂ ರಕ್ಕಸಂ ರಾವಣಂ ಕಳ್ದುಯ್ದಂ. ಆದೊಡಂತಾದುಟ್ಟಂ ದಿಟ್ಟಿಗೊಟ್ಟಿದನಿಲ್ಲಂ. ಇಂತಾಗಲೀಸುೞಿವೞಿಯೆ ಪೊಱಮಟ್ಟಂತಿತ್ತಣ್ಗೆ ಎಮ್ಮ ಬರವಾದುದು. ಎಮ್ಮೊಳ್ ನಿನಗೆ ದಯೆಯುಂಟಾದೊಡೆ ನಿನ್ನೊಡೆಯನಪ್ಪ ಸುಗ್ರೀವನೊಡನೆಮ್ಮಂ ಕೆಳೆಯರನಾಗಿಪುದು. ಅಂತೆಸಗಲ್ನೀಂ ತಕ್ಕವನೆಂಬುದಂ ಬಲ್ಲೆಂ." ಈ ನುಡಿಗೇಳ್ದು ಅಣುವಂ ಕಯ್ಮುಗಿಯುತೆ—"ಜೀಯ, ನಿನ್ನ ಮಡದಿಯಂ ರಾವಣನುಯ್ದನೆಂಬೀನುಡಿಯನಾಂ ವಿಶ್ವರೂಪಮಿದನೆಂತಱಿತೆನಂತೆಯೆ ಬಗೆವೆಂ. ಇದೊರ್ಡಂ ಆಣ್ಮನಾಣತಿಯಂತೆ ನಡೆವುದು ಊೞಿಗದವರ್ಗೆ ನ್ಯಾಯಂ. ಎನಗೆ ನೀನುಂ ಸುಗ್ರೀವನುಮೊಡೆಯರಪ್ಪಿರ್. ಅಂತಾಗೆ ನಿಮ್ಮ ಮನಂಗಂಡಂತೆ ಆಂ ವರ್ತಿಪೆಂ, ದಿಟಂ. ಆದಱಿಂದೀಗಳ್ ಗುರುವಾಣರನೆಡೆಗೆ ಬಿಜಯಂಗೆಯ್ದು ಅವರುಮನೆಮ್ಮವರುಮಂ ಪಾವನಂಗೆಯ್ವುದರ್ಕೆ ಪೊಱಮಡುವುದು," ಎಂಬುದುಂ—"ಅಕ್ಕೆ" ಎನೆ; ಆಂಜನೇಯಂ ರಾಮಲಕ್ಷ್ಮಣರನಿರ್ವರುಮಂ ಪೆಗಲೊಳ್ ಪೊತ್ತೊಡನೆ ಕೊಂಡುಯ್ದುವರಿರವನೊರೆಯೆ; ಸುಗ್ರೀವಂ ತಡೆಯದೆೞ್ದು ಪಾಸಿತ್ತುಕುಳ್ಳಿರಿಸಿ ಮನ್ನಿಸಿದಂ.

ಕೇಳ್ಕೆ, ಮುನಿನಾಥ! ಬೞಿಕಮಾವಾನರೆಂ ತನ್ನಣ್ಣಂವಾಲಿ ಮಡದಿಯಪ್ಪ ರುಮೆಯನಪಹರಿಸಿದ ಪರಿಯಂ, ಮತ್ತಮೇಗಳುಂ ತನಗೀವ ಕೋಟಲೆಯಂ ಸವಿಸ್ತರಂ ಬಿನ್ನೈಸಿ, ತನಗಿದಱೊಳ್ ಸಾಯನಪ್ಪನೆಂದು ದೇವರ್ ಒಳ್ಳೆರವಾಗುತೆ ನಿಜಪತ್ನಿಯಂ ಮಗುೞ್ಚಿ ತಂದಿತ್ತೊಡೆ, ತಾನುಂ ಸೀತೆಯಂ ಪುಡುಕಿ ತರ್ಪುದಱೊಳ್ ಸಾಯನಪ್ಪನೆಂದು ದೇವ

ರೊಳ್ ಬೇಡಿಕೊಳ್ವುದುಂ; ರಾಘವಂ ವಾಲಿಯಂ ಲೀಲಾಮಾತ್ರಮೆನೆ ಕೊಲನೆಡೆಗಟ್ಟಿ ಬಾಲೆಯುಂ ಮೇಣ್ ವಿಶಾಲರಾಜ್ಯಮಂ ಸುಗ್ರೀವಂ ಗಿತ್ತಂ.

ಇಂತಾಗಲ್ ಸುಗ್ರೀವಂ ವೀರರ ಸಾಸಕೆ ಪೊಗೞ್ದು ಒಡನೆಯೆ ಸೀತೆಯಂ ಪಿಂ ತರ್ಪ ಕಜ್ಜಮನಣಿಗೆಯ್ದು, ಪಲವೆಡೆಯ ವಾಣರರಂ ನೆರೆಯಿಸಿದಂ. ಮೇಣಾರಾಘವಂ ಲಂಕೆ ತೆಂಕಗಡಲಾಚೆಗಿರ್ಪುದೆಂದು ಬಗೆದಂದು ಸೋದರಂಗೆ—"ತಮ್ಮ ಈಗಳೀತಡಿಯೊಳ್ ನೆರೆದೆಮ್ಮೀಬಲಂ ಕಡಲ್ದಾಂಟಿ ಪೋಪಂತೆಸಗೈ," ಎಂಬುದುಂ; ಲಚ್ಚುಮಣಂ ಕಡಲ್ಗೆ—"ಎಲೆ ಕಡಲೆ, ಎಂತಿರ್ಪೆಯಂತೆಯೆ ಕದಲದಿರ್ಪುದೀಬಲಂ ನಿನ್ನಂ ದಾಂಟಿಪೋಪನ್ನಂ," ಎನುತೆ ನುಡಿಯೆ, ನುಡಿಯಂ ಕಡೆಗೊತ್ತಿದಂ ಕಡಲೊಡೆಯಂ. ಮತ್ತಂ ಸೌಮಿತ್ರಿ ಕೋಪದಿಂದರೆಚಣಂ ಬಿರುದಿಟ್ಟಿಯಿಂ ದಿಟ್ಟಿಸುತೊಡನೆಯೆ ಮುನ್ನೀರೊಳ್ ಪಾಱಿ ಬಿೞ್ದಂ. ಏನೆಂಬೆನಾತನ ಮೆಯ್ಯಿಂ ಕಡಲ್ನೀರ್ ಬೇಗುದಿಗೊಂಡು ಬತ್ತಿದುದು; ಜೀವಾದಿಗಳ್ ಬೆಂದುವು; ಆಗಸವಟ್ಟೆಯೊಳ್ ಬಿಡುಗಣ್ಣರ್ ಬೆದರ್ದರ್; ಕಪಿಸೇನೆಯಚ್ಚರಿಗೊಂಡುದು. ಆಗಳ್ ಅಣ್ಣಂರಾಮಂ—"ಇಂತು ನೀಂ ಗೆಯ್ದುದು ತಕ್ಕುದೆಂದಾಂಬಗೆಯೆಂ," ಎಂದು ತಮ್ಮಂಗೆ ಬುದ್ಧಿವೇೞ್ದು—ಅಕ್ಕೆ, ಎಂತಾದೊಡಂ ಕಡಲಂ ತುಂಬಿಸವೇೞ್ಕುಮೆನುತೆ ಸೀತೆಯುಗಲ್ಕೆಯಿನುಂಟಾದ ಕಣ್ಣೀರಿಂ ಮುನ್ನಂ ಕಡಲೆಂತುಟಂತೆ ಗೆಯ್ದಂ. ಆಗಳ್ ಬಾನತ್ತಣಿನರಳ್ಮಳೆ ಸುರಿದತ್ತು ರಾಮನ ಸಿರದೊಳ್.

ಇಂತಾಗೆ ರಾಮಂ ಪೊಗೞುತಿರ್ಪ ಕಡಲೊಡೆಯನಂ ತಳ್ಕೈಸುತೆಡೆಗೊಂಡು, ಕಟ್ಟಂ ಕಟ್ಟಿ, ದಾಂಟಿ, ಲಂಕೆಗೆಯ್ದಿ, ರಾವಣನಂ ರಕ್ಕಸಕುಲದೊಡನೆಯೆ ಕೊಂದು, ಸೀತೆಯನೊಡಗೊಂಡು, ಪೂದೇರೊಳ್ ಸರ್ವರಿಂಕೂಡಿ, ನಿಜನಗರಿಯಂ ಪದಿನಾಲ್ಗಾಲಂ ಸಮೆಯೆ ಪುಗುತೆ, ಮೇಣೊಂದುಮುಹೂರ್ತದೊಳ್ ಪಟ್ಟವಣೆಯೇರ್ದು, ತಿರೆಯಂ ಪೊರೆಯುತಿ

ರ್ದಂ. ಈತನಾಳ್ವಿಕೆಯೊಳ್ ತಿರ್ಯಗ್ಜಂತುಗಳುಂ ಸಂತಸಂಗೊಂಡುವು; ದೇವದುಂದುಭಿ ಸೂಱಿಱಿತು ಮೊಱಗುಗುಂ.

ಎಂಬಲ್ಲಿಗೆ ಅದ್ಭುತರಾಮಾಯಣದೊಳ್
ಏಕಾದಶಾಶ್ವಾಸಂ, ಸಂಪೂರ್ಣಂ.

# ದ್ವಾದಶಾಶ್ವಾಸಂ.

ಇಂತು ತಿರೆಯಂ ಪೊರೆಯುತಿರಲೊರ್ಮೆ ರಾಘವನಂ ಮನ್ನಿಸೆ ವಿಶ್ವಾಮಿತ್ರಂ, ಶೈಬ್ಯಂ, ಚ್ಯವನಂ, ಕಣ್ವಂ, ಮುತಪ್ಪ ಮೂಡಣ ದೆಸೆಯವರುಂ; ಆತ್ರೇಯಂ, ನಮುಚಿ, ಅಗಸ್ತ್ಯಂ ಮುಂತಪ್ಪ ತೆಂಕಣ ದೆಸೆಯವರುಂ; ಉಷಂಗು, ಕಾಮಜಂ, ಮುಂತಪ್ಪ ಪಡುವಣ ದೆಸೆಯವರುಂ; ವಸಿಷ್ಠಪ್ರಮುಖರಪ್ಪುತ್ತರದೆಸೆಯೊಳಿರ್ಪವರುಂ; ಪಲರ್ ಮುನಿಗಳುಂ-ತಮ್ಮ ತಮ್ಮ ಶಿಷ್ಯವರ್ಗರಸು ಪಣ್ಗಳಂ ಕೊಂಡು ಅಯೋಧ್ಯೆಗೆಯ್ತಂದು, ಕಾಣ್ಕೆಯನಿತ್ತಾಶೀರ್ವಾದಂಗೆಯ್ಯೆ; ರಾಘವಂ ಸೋದರರಿನುಂ, ಮಂತ್ರಿಗಳಿನುಂ ಬೆರೆದು ಪೂಜ್ಯರಂ ಯಥಾವಿಧಿ ಪೂಜಿಸುತಿರೆ; ರಿಸಿಗಳ್ ಭಕ್ತಿಗೆ ಸಂತಸಂಗೊಂಡು—" ಎಲೈ ಜಗನ್ನಾಥ! ಮುಂಮೆಯ್ಯೊಳ್ ನೋಂತ ನೋಂಪಿಯ ಬಲ್ಮೆಯಿಂ ನಿನ್ನನೀಗಳ್ ಕಂಡೆವಲ್ಲದೆ ಸಾಸಿರಗಾಲಂ ತಪದೊಳಿರ್ದೊಡಂ ಕಾಣಲ್ ನೆಱೆಯಲಾಱೆವು. ಜಗಕೆ ಮೇಲೆಸಗು," ಎನುತೆ-" ಮೆಯ್ಗೊಂಡು ಪುಟ್ಟಿ, ಮಡದಿಯ ನೆವದಿಂ ದುಟ್ಟರನೆಲ್ಲರಂ ಕೊಂದಿಕ್ಕಿದೀಮ್ಮೆಮೆಯಾರ್ಗೆ ನೆರಂ. ಸಾಜಮಾಗೆ ರಾವಣನಂತಪ್ಪ ದುಟ್ಟರೀಲೋಗದೊಳಿಲ್ಲಂ. ಬಲ್ಗೈಯವಂಗೆ ನೀನಲ್ಲದೆ ಮಾಱಾಂತರುಂಟೆ! ಕಡಲಂ ಕಟ್ಟಿದುದೆಂತಪ್ಪ ಸಾಸದ ಕಜ್ಜಂ. ಲೋಗರಂ ಪೊರೆಯಲೆನಿತು ಬನ್ನಮನೊಳಕೊಂಡೈ; ಪುಟ್ಟಿದ ಪಟ್ಟಣಮನುಱಿದೈ; ತಾಯ್ತಂದೆವಿರಂ ಮಱೆದೈ; ಪದಿನಾಲ್ಗಾಲಂ ಕಾಡೊಳೆತಿರಿದೈ; ಸೋದರನಿವಂ ಲಚ್ಚುಮಣಂ ಕಿಱಿಯಂ ಬೆಂಡಾದಂ; ಸೀತೆಯಿಾಲೋಕಮಾತೆಯೆಂತು ರಕ್ಕಸನೊಳ್

ಬಂದಿಯಾದಳ್ ! ಪಲನುಡಿಯಿನೇಂ ? ರಾಘವ ! ನಿನ್ನಭಯಪ್ರಸಾದದ ತ್ರಣಿನೀಸುರರುಂ ನರರುಮೆಣಿಕೆಯಿಲ್ಲದಿರ್ಪರ್,'' ಎನುತೆ ಬಲ್ಪಗೆಯೊಳ್ ಪೊಗೞುತಿರ್ದರ್.

ಆಗಳ್ ರಾಮಚಂದ್ರನೊತ್ತಿನೊಳ್ ಪಟ್ಟವಣೆಯೊಳ್ ಕುಳ್ಳಿರ್ದ ಸೀತೆ ತವಸಿಗಳ್ಗೆ–''ಎಲ್ಲೈ ಪೂಜ್ಯರೆ! ಎಮ್ಮರಸನ ವಿಷಯವಾಗಿ ನೀಮಿಂ ತಪ್ಪಣೆಯಿತ್ತುದು ನಿಚ್ಚಯಂ ನಾಣ್ನುಡಿಯಕ್ಕುಂ. ಏತರ್ಕೆನೆ, ದುಟ್ಟಂ ಕೈಕಸಿಯಣುಗಂ ಕಕ್ಕಸನಾದೊಡಂ ರಕ್ಕಸರೊಳ್ ಪೆರ್ಕಳನಲ್ತು,'' ಎಂಬುದುಂ; ಅವರೊಳೊರ್ವರೊರ್ವರ ಮೊಗಮಂ ದಿಟ್ಟಿಸುತೆ-'' ಇದೇ ನಿಂತಿವಳೊರೆದಳ್ ? ನೋಡೆ ಪುಸಿಯೊರೆವಳಲ್ತು, ಪೆಱತೇನಾನುಮುಜ್ಜರಿ ಯಿರ್ಕುಮೊ ? ಎನುತಾಡಲನಿತಱೊಳಾ ಸುಶೀಲೆ ಬಾಗ್ಗಿ ಬಾಮದಿಂ ಬಲ್ಲಿದರ್ಗೆಂದಳ್—'' ಸ್ವಾಮಿ, ಸಟೆಯೊರೆದಳೆಂದೆಣ್ಣದಿರಿಂ. ಅಪ್ಪಣೆ ಯಿತ್ತೊಡೀಯಿರವನೊಂದುೞಾಯದೊರೆಯೆ ಬಲ್ಲೆಂ,''ಎನೆ; ''ಅಂತಕ್ಕೆ'' ಎಂಬುದುಂ, ಪೇೞಲ್ತೊಡಂಗಿದಳ್ :—

''ಎಲ್ಲರುಂ ಲಾಲಿಪುದು. ಆನೀಮನದನ್ನನ ಕೈವಿಡಿವುದರ್ಕೆ ಮೊದಲ್ ಎನ್ನಯ ಜನಕಪ್ಪ ಜನಕನೆಡೆಯೊಳಿರ್ದುದರ್ ಬಲ್ಲಿರೆ. ಅಂತಾಯಡೆ ಯೊಳ್ ಬಳೆಯುತಿರ್ಪುದಂ, ಮಕ್ಕಳಾಟಿಕೆಯಾದೊಡಂ ಮಱೆತು ದಿಲ್ಲಂ. ಒಮ್ಮೆ ಎಮ್ಮರಮನೆಗೆ ಅತಿಥಿರೂಪದೊಳೊರ್ವಂ ಪಾರ್ವಂ ಬರೆ, ಅಯ್ಯನೊಯ್ಯನೆ ಎೞ್ದು ಮನ್ನಿಸಿ ಪಾಸಿತ್ತು ಕುಳ್ಳಿರಿಸಿದಂ. ಆಗಳಾಭೂ ಸುರಂ ಬೆಸೆಪ್ಪಂಗೆ—' ನೀನೊಪ್ಪಿದೊಡೆ ನಿನ್ನೀಯರಮನೆಯೊಳ್ ನಾಲ್ಗಾ ಲಮಿರಲಿಚ್ಚೈಪೆಂ,' ಎಂಬುದುಂ; ತಾತನೊಲ್ಲೆನೆಂಬನೆ ಸಂತಸದಿನೊಪ್ಪಿ, ತನ್ನ ಬೀಡೊಳೆ ನಿಲ್ಲಿಸುತೆ, ಎಂತುಂ ಕುಂದುದೋಱದವೋಲ್ ಸಾಕುತೆ, ಪಗಲುಮಿರುಳುಮವನನಗಲದೆ ಬೞಿಯೊಳಿರಲಾನುಂ ಪಿತನಂ ಬಿಟ್ಟು ದಿಲ್ಲಂ. ಇಂತಾಗಲೆಮಗೆ ತಾಂ ತಿರಿದಱಿದ ಪುಣ್ಯಕ್ಷೇತ್ರಮಂ ಬಣ್ಣಿಪಂ. ಈ ತೆಱನೊಳ್ ಕೆಲಗಾಲಂ ಪೋಗೆ, ಅವನೊಳಗೆ ಸಲಿಗೆಯುಂಟಾಗ ಲೊರ್ವಳೆ ಓರ್ಬ್ಳೊರ್ಮೆ ಅವನ ಸೇವೆಗೆಯ್ಯುತಿರ್ದೆಂ. ಇಂತುಮೆರಱ್ತೊ

ಗರ್ಾಲಂ ಸಮೆಯಲಾನೆಸಗಿದ ಸೇವೆಯೊಳ್ ಮೆಚ್ಚುಗೆಯುಂಟಾಯ್ತು. ಒನರ್ಾಳ್ ಪೊಟ್ಟೞಿಯೊಳುಪ್ಪವಡಿಸಿ, ಕ್ಷಾಲ್ಯಮಂ ತೀರ್ಚಿ, ಎನ್ನಂ ಕರೆದಿಂತೊರೆದಂ:—' ಮಗಳೆ, 'ಇತ್ತಲ್ ಬಾ. ಕಂಡುದೊಂದಚ್ಚರಿಯಂ ಪೇೞ್ವೆನೇನೆನೆ, ಮೊಸಱ ಜೇನೆಯ್ಯ ಕಡಲ್ಗಾಕಡೆಯೊಳ್ ಇಂಗಡಲೆಂ ದೊಂದು ಮುನ್ನೀರಿರ್ಕುಂ. ಅದಱ ನಡುವೊಂದು ಪುಷ್ಕರವೆಸರ ದ್ವೀಪ ವೆಸೆಗುಂ. ಆಪುಷ್ಕರದ್ವೀಪದೊಳ್ ಅಲರಿಜನಂಜೆ ಗೆಡೆಯಪ್ಪ ಪಯಿಂ ಭಾಸಿರೆಸಱ ಕೆಂದಾವರೆಗಳಿಂ ಕೂಡಿ ಕಿಚ್ಚಿನೋಲ್ ಬೆಳಗುತಿರ್ಪ ಪುಷ್ಕರ ಮೊಂದಿರ್ಕುಂ. ಅಂತಿರ್ಪ ದ್ವೀಪವರ್ಷದ ಮಧ್ಯದೊಳ್ ಎಣ್ದೆಸೆಯೊಳಂ ಬಿಡುಗಣ್ಣರ ಬಡಗಿಯವಂ ಕಟ್ಟಿದ ಎಣ್ದೆಸೆಯೊಡೆಯರ ಅರಮನೆಗಳ್ ತೋರ್ಕುಂ. ಇತ್ತಲ್ ಸುಮಾಲಿಯೆಂಬ ರಕ್ಕಸಂಗೆ ಕೈಕಸಿಯೆಂಬೊರ್ವ ಳಣುಗಿಯುಂಟು. ಈಕೊಡುಗೂಸಂ ವಿಶ್ರವಸ್ಸೆಂಬವಂಗೆ ಮದುವೆಗೆ ಯ್ದಂ. ದಿನಂ ಪೋಗಲ್ ಇವಳಿರ್ವರಂ ಗಂಡುಮಕ್ಕಳಂ ಪೆತ್ತಳ್. ಇವ ರೊಳ್ ಪಿರಿಯನೊರ್ವಂ ಸಾಸಿರಮೊಗದವಂ, ಕಿಱಿಯಂ ಪದಿಮೊಗದವಂ. ಇವರ್ ಪುಟ್ಟಿದಾಗಳಾಗಸದತ್ತಣಿಂ ಮಱಿನುಡಿಯೊಂದು–' ಈಯಿರ್ವರ್ ತನಯರ್ ಲೋಕಮಂ ಬಾಧಿಪರಪ್ಪರ್ ; ಈ ಕಾರಣಂ ರಾವಣರೆಂದು ಪೆಸರಿಕ್ಕುವುದು '—ಎಂದು ಪುಟ್ಟಿದುದು. ಈತೆಱದೊಳ್ ಮಕ್ಕಳ್ ಬಳೆ ಯುತಿರೆ ; ಕಿಱಿಯಂ ತವಸಿಂ ಬೊಮ್ಮನನೊಲಿಸಿ ವರಮಂ ಪಡೆದು, ಮುಪ್ಪೊಲಿಲಂ ದಾೞಿಯಿಡುತೆ, ಕಟ್ಟಕಡೆಗೆ ಐಗಳಂಗೆ ಕೆಳೆಯನಪ್ಪ ಪೊನ್ನೊಡೆಯನಾಳ್ವ ಪೊಲಿಲಪ್ಪ ಲಂಕೆಯಂ ಪೊಕ್ಕು, ಸೂಱಿಗೊಂಡು ಮೇಣವನನಟ್ಟಿ ತಾನಾಣ್ಮನಾದಂ.

" ಅಣ್ಣನ ಬೀರಮಂ ಪೇೞ್ವುದೇಂ ? ಎಳವರೆಯದೊಳ್ ಆಟ ಕೆಂದು ಸೂರ್ಯಚಂದ್ರಮರಂ ತಾಳಮಾಗೆ ಪಿಡಿವಂ; ಕಡಲಂ ಕಲಂ ಕುವಂ; ಮತ್ತಂ ಬಲ್ಮೆಯಿನಾದ್ವೀಪದೊಳೆ ದೆಸೆಯಾಣ್ಮರನಟ್ಟಿ ಮರಳ್ಚಿ ಬಂದು ಪಿಡಿಯದೋಲ್ ಕಾಪಿಡುತೆ ತಾನಿಂದಿರನರಮನೆಯಂ ತನ್ನ ಬೀಡಾಗೆ ಕೊಂಡದಱೊಳ್ ತನ್ನ ಬಳಗಂ ಕೂಡೆಯಾದ್ವೀಪಮನಾಳು

ತಿರ್ಪ೯ಂ. ಈತನಿರ್ಪೆ೯ನಾಡಂ ಬಣ್ಣಿಸಲಳವೆ ? ತಾನೋರೊರ್ಮೆ೯ಯೋರೊಂ ದೆಡೆಯಂ ಪೋಲ್ತೆಗ್ಗಿಯ್ದಾಯೆಡೆಯ ಸಾರವಸ್ತುಗಳನುಯ್ದು, ತನ್ನಪೊಱ ಲಂ ತುಂಬುವಂ. ಪಲಸು, ಕೌಂಗು, ತೆಂಗು, ಮಾಮರಂ, ಪನೆಮರಂ ಮುಂತಪ್ಪ ಮರಂಗಳಾವಗಂ ಫಲಂಗಳಿಂ ತುಂಬಿರ್ಕು೯ಂ. ಜಾದಿ, ಬಕು ಳಂ, ಬಂದುಗೆ, ಗೋರಂಟೆ ಮುಂತಪ್ಪ ಪೂಗಿಡುಗಳ್ ಸೊಗಯಿಸುಗುಂ. ಪುರುಳಿ, ಗುಬ್ಬಿ, ಕರ್ಬ೯ಕ್ಕಿ, ಮೇಲಪ್ಪ ಪಕ್ಕಿಗಳ್ ಮೆಲ್ದನಿಯಿಂ ಪಾಡುಗುಂ. ಮಿಗಂಗಳ ಭೇದಮಂ ಬಣ್ಣಿಸಲ್ ಬಾರದು. ನೀರೆಡೆ ತೋರ್ದೆ೯ಡೆಯೊಳುಂಟು; ಪಾಲ್ತೆಲಂ ಕಿಲ್ತೆಲಂ; ಲೋಗರೆಂತುಂ ಬನ್ನಮಂ ಕಂಡರಲ್ತು; ಐಸಿರಿಗೆ ಸರಿಯಿಲ್ಲಂ; ರನ್ನಂಗಳ್ಗೆ ನೆಲೆ:-ಇಂತಿರೆ ಪುರದ ನೆಲೆವನೆಗಳಂ ದಾಂಟಲಾಱದಾದಿತ್ಯಂ ತೆಂಕು ಬಡಗುಬೞಯೊಳೆ ಬಾನೊ ಳ್‌ಪೋಪನಪ್ಪಂ. ಇಂದಿರನ ಅಮರಾವತಿಯುಂ, ಮಾಸೇಸನ ಭೋಗವ ತಿಯುಂ, ಸಿರಿಯರಸನ ಶ್ವೇತದ್ವೀಪಮುಂ ಇದರ್ಕೆ೯ ಪಾಸಟಿಯಲ್ಲಂ. ಕೇಳೌ, ಬಾಲೆ! ಪಿರಿಯನಪ್ಪ ಸಾಸಿರಮೊಗದವನ ಬಲ್ಪುಪೆರ್ಮೆ೯ಗಳ್ಗೆ ಬೆದರ್ದು೯ ರಕ್ಕಸರ್ ಮಱಿವೊಕ್ಕು ಅವನಂ ಸೇವಿಪರ್; ನಾಗರ್ ಸಾಗು ವರ್, ನಾಲ್ಮೊಗದವಂ ಪಂಚಾಂಗಮನೋದುವಂ; ಐಗಳಂ ಪಡಿಯ ಱಂ. ಗುಣದೊಳ್ ಪುರುಡೇಂ ? ಅಮರ್ದು೯ಣಿಗಳವನಡಿದಾವರೆಯ ಬಂ ಡುಣಿಗಳ್. ಇಂತಿರೆ ಕುಱಿವಾನಸರೆಮ್ಮಂ ಲೆಕ್ಕಿಪನೇ ? ಪೆಣ್ಣೆ ! ಆಯಿ ರ್ವ೯ರ ಪೆಸರನೆ ಕೇಳ್ದೊಡಂ ರೋಮಾಂಚಂ ಪುಟ್ಟುಗುಂ; ಅದಱೊಳುಂ ಪಿರಿಯನಿಂಪಿರಿದು. ಎಂತಿವರ ಪುಟ್ಟೊ, ಪುಟ್ಟಿಗೆಂತೆಂತು ಪೆಸರೊ, ಪೆಸ ರ್ಗೆ೯ಂತೆಂತು ಮೊಗಂಗಳೊ, ಮೊಗಂಗಳ್ಗೆಂತೆಂತು ಮೆಯ್ಯೊ, ಮೆಯ್ಗೆಂ ತೆಂತು ಬಲಮೊ, ಬಲಕ್ಕೆಂತೆಂತು ಬೀರಮೊ, ಮೇಣಾಬೀರಕಿನ್ನೆಂತೆಂತು ಪೆಂಪೊ ಕಾಣೆಂ; ಕೇಳೆಂ. ಶಿವಶಿವಾ !' ಎನುತೆ, ಕಟ್ಟಚ್ಚರಿಯಪ್ಪೀಕಥೆ ಯಂ ಎನಗೆ ತಾಂತಿಳಿಪಿ, ಗಡುದಾಂಟಿ ಯಾತ್ರೆಗಾಗೆ ಪೋದಂ.

ಎಂಬಲ್ಲಿಗೆ ಅದ್ಭುತರಾಮಾಯಣದೊಳ್
ದ್ವಾದಶಾಶ್ವಾಸಂ ಸಂಪೂರ್ಣ೯ಂ.

# ತ್ರಯೋದಶಾಶ್ವಾಸಂ.

---

" ಕೇಳ್ವುದೆಲ್ಲರ್, ಇಂತೀವಾರ್ತೆಯಂ ಕೇಳುತೆ, ನೀಮೀಗಳಚ್ಚರಿಗೊಂಡಂತಾನುಮಾಗಳಂತೆಯೆ ಕಟ್ಟಚ್ಚರಿಗೊಂಡೆಂ. ಪೇಲ್ವುದೇನೀಗಳುಮೆನ್ನ ಮನದೊಳ್ ತಗುಳ್ದಿರ್ಕುಂ. ಆದೊಡೆ ಒಯಲ್ಕುಡಿಯೆಂದಾನಿದನಿನ್ನೊರೆಯೆಂ. ಏಕೆನೆ, ದಶಕಂಠಂ, ಪಾರ್ವಂ ಪಿಂತೆ ಪೇೞ್ದಂತೆ ದುಷ್ಟನುಂ ಪಾಪಿಯುಂ, ಸಾಸಿಯುಮಪ್ಪನೆಂದು ಕೇಳ್ದಂ ಕಂಡುಮುಂಟು. ಎನ್ನುಮನಿನಿತು ಬನ್ನಕೆ ಗುಱಿಗೆಯ್ದನಲಾ! ಇಂತಿರಲ್ ಈತನಣ್ಣಂ ಸಹಸ್ರಕಂಠಂ ಜಗದೇಕವೀರಂ ರಾಕ್ಷಸಾಧಿಪಂ ಇನ್ನೆನಿತು ಪರಾಕ್ರಮಿಯೊ, ಎನಿತು ಬಲಾಢ್ಯನೊ, ಮೇಣೆನಿತ್ತು ಕ್ರೂರನೊ, ಆರಱಿವರ್! ಕಿಱಿಯರಸನಂ ಗೆಲ್ವುದರ್ಕೆಯೆ? ಎಮ್ಮರಸಂಗಿನಿತ್ತು ಬವಣೆ, ಬೇನೆ, ದಣುವು, ತೊಡರ್ ಮುಂತಪ್ಪೆಡರೊಡರೆ, ಪಿರಿಯರಕ್ಕಸನಂ ಮುಱಿವ ಸೈಪನೆಣಿಸಲ್ ಬಹುದೆ! ಅದಂತಿರ್ಕೆ. ಮತ್ತಮವನಂ ದಿಟ್ಟಿಸಲುಂ ತೀರುವುದೆ! ನಿಶ್ಚಯಂ. ಈಪಿರಿಯರಾವಣನೆಂತಿರ್ಪನೊ! ಆತನ ಇರ್ಛಾಸಿರಂ ತೋಳ್ಗಳ ಬಲ್ಪೆಂತೋ! ಅರೆಗಳಿಗೆಯಾದೊಡಂ ಗೆಲ್ವರ್ ಮೂಜದೊಳಗಾರುಮಿಲ್ಲದೆ ಪೋದರೇ!" ಎನುತೆ ಜುಚ್ಚಿ ನುಡಿವುದುಂ; ಸೀತೆ ಪೇೞ್ದುದನಿತ್ತುಂ ಸಾಜಮೆನುತೆ ತಲೆದೂಗಿದರ್ ಕಿತ್ತಡಿಗಳ್.

ಭಾರದ್ವಾಜ! ಆಲಿಸ. ಮಡದಿಯೆಂತೆಂತು ಸಹಸ್ರಕಂಧರನ ಬಲ್ಪಂ ಪೊಗೞ್ವಳಂತಂತು ಕೋಪಂ ಪೆರ್ಚಿದುದು; ಕಣ್ಗಳ್ ಕೆಂಪಾದುವು; ಮೆಯ್ನವಿರ್ ನಿಮಿರ್ದತ್ತು; ಕುಡಿಮೀಸೆ ಕುಣಿದುದು; ಪಲ್ಗಳೊಂದನೊಂದು ಕಡಿಗೊಂಡುವು; ಮೆಯ್ಯುಬ್ಬಿದುದು; ಭುಜಂಗಳಲುಗಿದುವು. ಒಡನೆಯೆ ರಾಘವಂ ಸಿಂಹನಾದಮಂ ಗೆಯ್ದು—" ಅಂತಪ್ಪ ರಕ್ಕಸನಂ ಗೆಲ್ವ ಬಲ್ಮೆಯಿರ್ಕುಮೊ ಕಾಣ್ಬೆಂ; ಈಗಳೆ ಗಂಡುಗಪಿಗಳೆಲ್ಲರ್ ಪೊಱಮಡಲಕ್ಕುಂ," ಎನುತಾಜ್ಞೆಯಿತ್ತು ದಿವ್ಯಪುಷ್ಪಕಮಂ ಬರಿಸಿದಂ.

ಅನಿತಱೊಳೆ ಕಟ್ಟಪ್ಪಣೆಯಂ ಕೇಳ್ದು ಮೆಯ್ವೆರ್ಚಿ, ನೀಲಂ, ನಳಂ ಜಾಂಬವಂ, ಹನುಮಂ, ಸುಷೇಣಂ, ಸುಗ್ರೀವಂ, ಅಂಗದಂ ಮುಂತಪ್ಪ ಮರ್ಕಟನಾಯಕಪ್ರಮುಖರುಂ; ಭರತಂ, ಲಕ್ಷ್ಮಣಂ, ಶತ್ರುಘ್ನಂ ಮುಂತಪ್ಪ ವೀರರುಂ, ಪಡೆವಳರುಂ, ಮಂತ್ರಿಗಳುಂ, ಮನಮಿರ್ದ ತವಸಿಗಳುಂ ಪೆರ್ಬಲದೊಡನೆ ಪೊಱಮಟ್ಟರ್. ಇವರ್ಗೆ ನೆರವಾಗಿ ವಿಭೀಷಣನುಂ ರಕ್ಕಸವಡೆಯೊಡನೆ ಪೊಱಮಟ್ಟಂ. ರಾಘವನುಂ ತಡೆದುದಿಲ್ಲಂ; ಸತಿವೆರಸು ಪುಷ್ಪಕಮನೇರ್ದಂ. ಇಂತೆಲ್ಲರುಂ ಪೊಱಮಟ್ಟು ಪುಷ್ಪಕಮನೇಱಲ್; ಬೇಗದೊಳ್ ಪರ್ದು ಪಿರಿದು, ಪರ್ದಿಂ ಗಾಳಿಯೆ ಬೇಗಂ, ಈಪುಷ್ಪಕಂ ಗಾಳಿಯಿನುಂ ಪಿರಿದು ವೇಗವಾಗೆ ಪಾಱೆ; ನಾಡೆಲ್ಲಂ ಕಂಡು ಕಾಣದಂತಾಯ್ತು. ಇಂತಾವಿಮಾನಂ ಕಡಲ್ಗಳಂ ಕಳೆದು, ಮಾನಸೋತ್ತರಪರ್ವತದೆಡೆಗೆ ಬರೆ; ವೀರರೆಲ್ಲರಿಱಿದು ಸಿಂಹನಾದಂಗೆಯೆ; ಬೆಟ್ಟಂ ಬಿರಿದುದು; ಕಡಲ್ ಕದಡಿದುದು; ಪಗಲೊಳೆ ಮೀನ್ಗಳ್ ಜಗುಳ್ದು ಬಿಳ್ದುವು. ಔತ್ಪಾತಿಕಮಿಂತಾಗಲಿದಱಡಿಯಱಿಯದೆ ನಾಡೊಡೆಯನಪ್ಪ ಸಹಸ್ರಕಂಠರಾವಣಂ ಕಣ್ಗೆಟ್ಟು—ಏನಿದೇನೆಂಬನಿತಱೊಳ್, ಪೊಲಿಲ್ಗಾಪಿನವರ್ ಪೊಡೆಮಟ್ಟು ಪೇಳ್ದಿರ್:—"ಜೀಯ್ಯ! ಆರೆಂದಱಿತುದಿಲ್ಲಂ. ಕೆಲರ್ ಕುಱುಚಾಳ್ಗಳ್, ಕೆಲರ್ ನಿಡುಮೊಗದವರ್. ಇವರ್ಗೆ ಬಾಲಮೊಂದಿರ್ಕುಂ. ಪೆರ್ವಡೆವೆರಸು ಬಂದಿರ್ಪರ್ ಬಲ್ಸಾಸಿಗಳ್ ಕಣಾ! ಎಮ್ಮಂ ನೋಯಿಪರ್, ದೇವರೇ ನೋಡಲಕ್ಕುಂ," ಇಂತು ಬಿನ್ನಯಿಸೆ; ರಾವಣಂ ಕನಲ್ದು—"ಏಂ ಕುಱುಚಾಳ್ಗಳ್, ಬಾಲಮುಳ್ಳರ್, ಎಮ್ಮ ನಾಡಂ ಪುಗುವರ್! ಅಚ್ಚರಿ! ಎತ್ತಣವರ್? ಮತ್ತಂ ಪಿರಿದು ಬೊಬ್ಬಱಿವರ್ಗಡ! ಮೂಜಗಮುಮಂ ಸೂಱೆಗೊಂಡವರೋ? ಎಂತು ಬೀರರ್! ಅಲ್ಲದೊಡೆ ಎಮ್ಮೆಡೆಗೆ ಬರ್ಪರಲ್ತು. ಏಕೆನೆ, ಆನೆ ದೆಸೆಯಾಣ್ಮರಂ ಪಿರಿದೂಱೆಗಕಿಟ್ಟಿರ್ಪೆನೆನುತುಂ; ಬಿದಿಯನುಮಂ ಬಿದುವನುಮಂ ಪಾಸಟಿಗೆಯ್ವನಲ್ಲಮೆನುತುಂ, ಮುಪ್ಪೊಱಲುರಿಕನೊಲ್ಮೆಯುಂಟೆಂದುಂ, ಮುಪ್ಪೊಱಲೆ ಬಲ್ಲುದು. ಎನ್ನಾಣೆಯಿನೆ ಪೆಱನೇಸರ್ಕಳ್ ತಿರಿದು ಪಗಲಿ

ರುಳ್ಗಳನಾಗಿಪರೆಂಬುದಂ, ಕಡಲೇೞುಂ ಎನ್ನಾಣೆಯಂ ಮೀಱದಿರ್ಪುದೆಂಬುದಂ, ಪಿರಿದೇಂ, ಮೂಲ್ಲೋಕಮುಮೆನ್ನ ಕೆಯ್ಯ ಪಿಡಿಯೊಳಡಂಗಿರ್ಪುದೆಂಬುದನಱಿತುಂ ಮಱೆದು ಬಾಯ್ದೆಱೆದ ಬಗ್ಗದ ಬಾಯೊಳ್ ಬೀೞಲ್ ಬರ್ಪ ನೊರಜುವುೞುಗಳಂತೆ ಬಂದರಲಾ! ಓ! ಓ! ತಪ್ಪಿದೆಂ, ತಪ್ಪಿದೆಂ. ಈತಂಗಳ್ ಪೊಣರಲ್ ಬಂದರಲ್ತು ಸಾಜಂ. ಆದೊಡೆ ದ್ವೀಪಾಟನಂಗೆಯ್ಯೆ ನಾವೆಯೊಳ್ ಬಂದರಕ್ಕುಂ. ಅಂತು ದೀವಿಯಿದಂ ಕಾಣುತೆ ಸಂತಸದ ದನಿಗೆಯ್ದರ್. ಅಲ್ಲದೊಡೆ ನಾಡುಗರಿವರಂ ಕಾಣುತೆ ಬೆರ್ಚಿ ಚೀಱಿದರೊ ? ಎಂತಾನುಮೀಯಿರವಂ ಕಣ್ಣಿಂ ಕಂಡು, ಮನದಿಟ್ಟಂಗೆಯ್ವುದೆಂದು ಪೊಱಮಡುವವಸರದೊಳ್—ಪರರಾಯರಂ ಕಾಣ್ಬೆಡೆಗುಂ, ಸ್ವಯಂವರದೆಡೆಗುಂ, ವೇದಿಕೆಯಂ ಕಾಣ್ಬೆಡೆಗುಂ, ರಣದೆಡೆಗುಂ ತಾನೊರ್ವನೆ ಪೋಪುದರಸಂಗೆ ತಕ್ಕುದಲ್ತು, ಅದಱಿಂ ಈಯೆಡೆಗಾನೊರ್ವನೆ ಪೋಪುದಾಗದೆನುತೆ, ಮನಂದಂದು, ಮೆಯ್ಗಾವಲ ಭಟರಿಂ ಕೂಡಿ ಪೊಱಮಟ್ಟಂ.

ಎಂಬಲ್ಲಿಗೆ ಅದ್ಭುತರಾಮಾಯಣದೊಳ್
ತ್ರಯೋದಶಾಶ್ವಾಸಂ ಸಂಪೂರ್ಣಂ.

## ಚತುರ್ದಶಾಶ್ವಾಸಂ.

ವತ್ಸ, ಇಂತು ಬಂತಿದಲೆಯಂ ಜಲ್ಲಣಮನಿಟ್ಟು, ದಟ್ಟಿಯಂ ಬಿಗಿದು, ಸೂಸಕಮಂ ತೊಟ್ಟು, ಸಾಲೊಳ್ ಮಕುಟಗಳನಳವಡಿಸಿ, ಕೈಪಿಡಿಯಂ ಕೊಂಡು ಕತ್ತುರಿಯ ಬೊಟ್ಟಿಟ್ಟು, ಮೀಸೆಯಂ ತಿರ್ದಿ ಪುರಿಗೆಯ್ದು, ಸೊಬಗಿಂಗೆ ನಸುನಕ್ಕು, ನಱುದಂಬುಲಮಂ ಸವಿದು, ಇರ್ಛಾಸಿರ ಕೆಯ್ಗಳೊಳಂ ಪಲವಗೆಯ ಸಾಯಕಂಗಳಂ ಕೊಂಡು ಮೆಯ್ಗಾವಲವರಿಂ ಬಳಸಿ, ಪೊಱಮಡುವುದುಂ; ರಾಯಂಗೆ ಬೆಂಬಲಮಾಗೆ ಕೌಣಪಂ, ಕಾಲವೇಗಂ, ಶರಣಂ, ಹಲೀಮುಖಂ ಮುಂತಪ್ಪ ಪಡೆವಳರ್ ತಮ್ಮ ತಮ್ಮ ಪೆರ್ವಡೆವೆರಸು ತೆರಳ್ದರ್. ಒಡನೆಯೆ ಚಿತ್ರದೇವಂ, ಸುಪ್ರಸಾದಂ, ಕಿರೀ

ಟಂ, ಕಲಶೋದರಂ, ಕಾಲಕಕ್ಷಂ ಇವರಾದಿಯಪ್ಪ ರಾವಣನನುಗರುಂ ಅಯ್ಯನಂ ಬೆಂಬತ್ತಿ ಸಂದರ್. ಇವರ್ಗೆ ಪಡಿಬಲಂ ನೆರವಾದುದು. ಆಲಿಸ್ಯೆ, ಈಪಡೆಯಂ ಬಣ್ಣಿಸಲೆಂತು ! ಕಂಡೊಡೆ ಬೆದರ್ಕೆ; ಕೇಳ್ದೊಡ ಚ್ಚರಿ; ಎಮ್ಮಂತಲ್ತವರ ರೂಪು; ಕೆಲಬರ್ಗೆ ಸೊಂಡಿಲಂತೆ ನಿಡುಮೂಗು; ಕೆಲಬರ್ಗೆ ಪಱಿಮೂಗು; ಕೆಲಬರ್ಗೆ ನಿಡುಗಣ್; ಕೆಲಬರ್ಗೆ ಗುೞಿಗಣ್; ಕೆಲರ್ಗೆ ಪೆಡದಲೆ ; ಕೆಲರ್ಗೆ ಬಿಡುದಲೆ ; ಕೆಲಬರ ಕೈ ನೀಳಂ ; ಕೆಲಬರ ಕೈ ಕುಱುಚು; ಕೆಲಬರ್ಗೆ ಪೆೞಗಾಲ್; ಕೆಲಬರ ಮೆಯ್ವಣ್ಣಂ ಕಱಿದು; ಕೆಲರ ಬಣ್ಣಂ ಬಿಳಿದು; ಪಸುರ್ವಣ್ಣಂ ಕೆಲರ್ಗೆ; ಕೆಲರ್ಗೆ ಬೆನ್ನೊಳೆ ಬಾಯ್; ಕೆಲರ್ಗೆ ನೆತ್ತಿಯೊಳ್; ಕೆಲರ್ಗೆ ಕೌಂಕುೞೊಳ್; ತೊಡೆಯೊಳ್ ಕೆಲರ್ಗೆ ಬಾಯ್; ಕೆಲರ್ಗೆ ಪಂದಿಯಂತೆ ಮೊಗಂ; ಕೆಲರ್ಗಾನೆಮೊಗಂ; ಕೞ್ತೆಯ ಮೊಗದೋಲ್ ಮೊಗಂ ಕೆಲರ್ಗೆ ; ಸೊಣಗದ ಮೊಗದಂತೆ ಕೆಲರ್ಗೆ; ಇವರೊಳ್ಗೆಯುಂಗೆಯೆ ಒಂದೆರಡಲ್ಲಂ, ಪತ್ತಲ್ಲಂ, ನೂಱಲ್ಲಂ, ಸಾಸಿರ ಮೊಗಂಗಳ್. ಈಯದ್ಭುತಸೇನೆಯಂ ಕಾಣ್ಬುದರಿದ್ಯೆ.

ಇಂತೇರ್ಪಟ್ಟ ಪಡೆಯೊಡನೆ ನಡೆತಂದು, ಮುಂತಿರ್ಪ ರಾಮಸೇನೆ ಯಂ ಕಂಡು, ಸೋಜಿಗಂಗೊಂಡು, ಇನಿತ್ತು ಪಡೆಯೇತರ್ಕೆ ಬಂದುದೊ? ಎಂತು ಬಂದುದೊ ? ನಾಯಕನಾರೊ ? ಎಂದು ಸಂಕಿಸುತ್ತಿರೆ ; ಆಗಸ ದತ್ತಣಿಂ ಅಶರೀರನುಡಿಯೊಂದು—"ಎಲೆ ಮರುಳೆ! ನೀನಱಿಯಾ ! ಈರಾಮಂ ಅಯೋಧ್ಯೆಗೊಡೆಯಂ ; ನಿನ್ನನುಜನಾಗಿರ್ದ ದಶಕಂಠನೀತನ ಪೆಣ್ಡತಿಯಂ ಕಳ್ದುಯ್ದನೆಂಬ ಪಗೆಯಿನವನಂ ಮೇಣವನ ಬಳಗಮಂ ಕೊಂದಿಕ್ಕಿ ಈಗಳ್ ನೀನವನಗ್ರಜನಾಗಿರ್ಪಿನಂ, ನಿನ್ನಂ ಕೊಲಲೆನುತುಮಿ ತ್ತಂ ಬಂದಿಹಂ, ದೇವರೂಪನವಂ," ಎಂದು ಪುಟ್ಟಿ; ಉರಿವಗ್ಗಿಯೊಳ್ ನೆಯ್ವೊಯ್ದಂತೆ ರೋಸಮೆಣ್ಮಡಿಯಾದುದು. ನುಡಿಗೇಳ್ದರೆಗಳಿಗೆ ಕೋಪಂ ಪಿರಿದಾಗೆ; ತಾನಿಲ್ಲಿರ್ಪೆನೆಂದಱಿಯದಾದಂ. ಮತ್ತಂ "ಲೇಸು! ಲೇಸು! ಆಂ ಪಿಂತೆಣ್ಣಿದುದು ಪುಸಿಯಲ್ಲಂ. ಪೊಣರಲೆಂದೇ ಬಂದಿರ್ಪರ್. ಅಕ್ಕೆ ! ನೋಡುಗೆ!" ಎಂದು ಮುಂದೊತ್ತಿ ಸೇನೆಯೊಡನೆ ಪೋದಂ.

ಮುನಿಪ, ರಕ್ಕಸರ ಬೀರಮೇಂ ಕಿಱಿದೆ? ಪಗೆವಡೆಯಂ ಮುಸುಂಕುವುದೆಂದು ಪಡೆವಳರ ನುಡಿ ಪುಟ್ಟುವ ಮುನ್ನಮೆ-ಅಂ ಮುನ್ನಮಾಂ ಮುನ್ನಮೆಂದು ಕಲ್ಮರಂಗಳನೆತ್ತಿ ಕೆಲರ್, ಬಿಲ್ಗಱಿಗಳಂ ಪಿಡಿದು ಕೆಲರ್, ಸುರಗಿಯಡ್ಡಣಂಗಳನಾಂತು ಕೆಲರ್, ಪೆರ್ಬೆಟ್ಟಮುಂ ಪೊತ್ತು ಕೆಲರ್, ರಾಘವನ ನರವಾನರ ಸೈನ್ಯಂಗಳಂ ಸುತ್ತುಂ ಮುತ್ತಿ ಬೊಬ್ಬಿಱಿದರ್.

ರಾಮಸೇನೆಯುಂ ಬೆದರ್ದುದಿಲ್ಲಂ. ಬೆಂಗಡೆಯೊಳ್ ರಾಘವಾದ್ಯರುಮಂ, ವಿಭೀಷಣಂ, ನಲಂ, ಅಂಗದಂ, ಸುಗ್ರೀವಂ ಮುಂತಪ್ಪ ವೀರರುಮನುೞಿದು, ಎಡಬಲಗಡೆಗಳೊಳ್ ಆಳ್ವಡೆ ಕೋತಿವಡೆಗಳನಿಟ್ಟು, ವಿಭೀಷಣನ ರಕ್ಕಸವಡೆಯದು ಪಗೆವಡೆಯಂ ಮುಂಗಡೆಯೊಳ್ ತಾಂಗೆ, ಕಲ್ಮರಂಗಳಂ ಪಿಡಿದರ್ಗೆ ಕಲ್ಮರಂಗಳನೆ ಪಿಡಿದು, ಬೆಟ್ಟಮನೆತ್ತಿ ಬಂದವರ್ಗೆ ಬೆಟ್ಟಂಗಳನೆ ಪೊತ್ತು, ಬಿಲ್ಬಾಣಂಗಳಂ ಪಿಡಿದವರ್ಗೆ ಬಿಲ್ಬಾಣಂಗಳಂ ತಾಳ್ದು, ಕಾದಿದುದು. ಇರ್ಕಡೆಯೊಳುಂ ಸಾಸದೊಳ್ ದೋಸಂ ಕಂಡುದಿಲ್ಲಂ. ಓರೊಂದು ಪಡೆಯವರ್ ಪೊಯ್ಯಲೆಂದೆತ್ತಿದ ಮರಂಗಳಂ ಪೆಱತೊಂದು ಪಡೆಯವರ್ ಮೈತಪ್ಪಿಸಿಕೊಂಡವುಗಳನೆ ಸೆಳೆದು ಮರಲ್ದು ಮದಱಿನೆ ಅವರನಪ್ಪಳಿಸುವರ್; ಬೆಟ್ಟಮಂ ಬೆಟ್ಟಕೊಡ್ಡುವರ್; ಕಣೆಗಳಂ ಕಣೆ ಕತ್ತರಿಸಿದುವು. ಇಂತವರ್ಗಿವರ್ಗೆ, ಇವರ್ಗವರ್ಗೆ, ಸರಿಸರಿಜುದ್ಧಮಾಗಲ್ ಸೋಲಂ ನುರ್ಗುನೂಂಕಾಯ್ತು. ಕಡಿದುಡಿದ ಕೋಲ್ಗಳ ರಾಸಿಯಂ ನೋಡೆ ಸಾಜವಾಗಿ ಶರನಿಧಿಯಂತೆ ಕಾಣಿಸಿತು. ಇರ್ತಂಡದ ಕೆನ್ನೀರಮುನ್ನೀರೊಂದನೊಂದು ಕೂಡಿದುದು. ಕಲ್ಮರಂಗಳ ರಾಸಿಯಂ ಕಂಡೊಡೆ, ಮಯಂ ಈತಂಗಳ ಸಂಸರ್ಗ ಮನೊಲ್ಲೆನೆನುತೆ ತನ್ನವರ್ಗಾಗುತೆ ಪೆಱತೊಂದು ಪೊಸನಾಡನೆ ಕಟ್ಟದೆ ಬಿಟ್ಟೆರಂ. ಬೆಟ್ಟಂಗಳೊಟ್ಟಿರ್ಪುದಂ ದಿಟ್ಟಿಸಿದೊಡೆ ಕಟ್ಟಚ್ಚರಿ ಪುಟ್ಟುವುದು. ತುತ್ತತುದಿಗುಂ ಬಾನ್ಗಂ ಮೊರ್ಗೇಣೆ ಅಂತರಂ.

ಈತೆಱದ ಸಮದಂಡಿಯ ಯುದ್ಧಂಗೆಯ್ದು ಸಾಯಕಂಗಳೆಲ್ಲಂ ಸಮೆಯೆ; ಇರ್ತಂಡದಿಂ ಮಾಯಾವಿದ್ಯೆ ಪೊಱಮಟ್ಟುದು. ಓರೊರ್ವರಂ

ಮೇಣೋರೊರ್ವರ್ ನುಂಗಲೆಂದು ಬರ್ಪ ಮುನ್ನಮೆ ಪೆಱತೋರೊ ರ್ವರ್ ನುಂಗಿ ಬಿಡುವರ್. ಪುಲಿಯಾಗಿ ಮೇಲೆ ಪಾಯ್ದೊಡೆ ಪಂದಿಯಾಗಿ ಸೀೞ್ವರ್. ಆನೆಗಳ್ ಬಂದೊಡೆ ಸಿಂಗಂಗಳ್ ಮುಱಿವುವು. ಈಪರಿಯೊಳ ಮಾರ್ಗಂ ಗೆಲ್ವಾದುದಿಲ್ಲಂ. ಇಂತುಂ ತೀಱಿ ಪಿಂತಣ ಕವಡುಬಿಜ್ಜೆಯ ನ್ನುೞಿದು ಮೆಯ್ಗಾಳೆಗಕ್ಕೆ ತೊಡಂಗಿದರ್. ಇದಱೊಳುಮಾರ್ಗಂ ಸಾ ರಂ ತೋರ್ದುದಿಲ್ಲಂ. ಮತ್ತಂ ಗುದ್ದಾಟಂ ಪ್ರಾರಂಭಮಾದತ್ತು. ಇರ್ತಂ ಡದೊಳುಂ ಪೊಯ್‌ಕೆಯ್ಯಾಗಲ್, ಸೋಲಗೆಲ್ಲವಱಿಯೆ ಬಿಡುಗಣ್ಣಾರ್ ಕಣ್ಬಿಟ್ಟು ಕಾಯುತಿರ್ದರ್. ಅವರ್ಗುಮಸಾಧ್ಯಮಾಯ್ತು. ಈಗಳ್ ಇರ್ಪಡೆಯುವರ್ಗುಂ ರೋಸಂ ಪಿರಿದಾಗೆ ಕಸಿಕಿಸಿಯೊಳ್ ಪೊಣರ್ದರ್. ಆದೊಡೆ ರಾವಣಸೇನೆಯೊಡನೆ ರಾವಣಾರಿಸೇನೆಯ ಕಸಿಕಿಸಿ ನಡೆದುದಿಲ್ಲಂ. ಲಂಕೆ ಪುಷ್ಕರಕೆ ಸೋಲ್ತುದೆಂಬುದುಂ, ಎಮ್ಮಾಳ್ಬಲಂ ಮುಂಬರಿದುದು.

ಈತಂಗಳುಂ ತಬ್ಬಲಿಗಳಲ್ತು. ತಮ್ಮ ರಕ್ಕಸವಡೆ ಪಿಂಜರಿದುದೆಂಬ ಕಿನಿಸಿಂ ಪೆದೆಯಂ ಬಿಲ್ಗೊಪ್ಪಿಗೇಱಿಸುತೇಱಿಸುತೆ ದೊಣೆಯಿಂ ಕಣೆಯಂ ತೆಗೆದು ಜೋಡಿಸುತೆ ಜೋಡಿಸುತೆ ಮುಂತೆರಳ್ದರ್. ಆದೊಡೇಂ! '' ಪಂದೆ ಗಳ ಬಾಯ್ಗೊಬ್ಬು ಪಿಂದೆ ನಾರಿಯರೆಡೆಯೊಳ್ '' ಎಂಬ ನಾಣ್ನುಡಿಯಿ ರ್ಕುಂ. ಅಂತೆ. ಅಂದಂದಿಗುಮಿಂತಿರ್ಪ ರಕ್ಕಸರಂ ಕಂಡಿಲ್ಲಂ. ಕೆಲರ್ಗೆ ಮನಂ ಮುಂಬರಿಯದು; ಕೆಲರ್ಗೆ ಮನಂ ಮ್ಮುಂಬರಿದೊಡಂ, ಕಾಲ್‌ಪರಿಯದು; ಕೆಲರ್ಗೆ ಮನದೊಡನೆ ಪೆಜ್ಜೆಯುಂ ಪೆಜ್ಜೆಗೆಟ್ಟುದು; ಕೆಲರ್ ಬರುತೆಬರುತೆ ಕೆಯ್ಮುಗಿದರ್; ಕೆಲರ್ ಬೆಂಗೊಟ್ಟರ್; ಕೆಲರ್ ಕಾಲ್ಗೆ ಬುದ್ಧಿಯೊರೆದರ್. ಇಂತಾದೊಡಂ ಕೆಲರ್ ದಿಟಮನಂಗೆಯ್ದು ಪಗೆಗಳಂ ಪೊಯ್ಯಲ್ ಪೋದರ್. ಇವರೊಳುಮಾಜಿಗೆ ಬರ್ಪನಿತಱೊಳ್ ದಿಟ್ಟತನದ ಕಟ್ಟು ಕಡಿದು ತನ್ನಿಂ ತಾನೆ ಕೆಲರ ಕೈದುಗಳ್ ಜಗುಱ್ದುವು. ಕೆಲರ್ ಮಱ ವಟ್ಟುಪೋದರ್, ಕೆಲರ್ ಕಡುಭಯದಿಂ ನೆಲನನಾದೊಡಂ ಪುಗುವೆ ವೆಂದು ತಿರೆಯಂ ಬೆರಂಟುತಿರ್ದರ್. ಮೇಣುೞಿದರಾಳ್ತನದ ಬಿರುದಿಂಗೆ ಮೇಲ್ವಾಯ್ದರ್. ಇಂತಾಗಲಿವರ್ಗವರ್ ಅವರಿವರ್ಗೆ ಪೊಯ್ದರ್.

ಪೆಟ್ಟೊಂದೆಡೆಗೆ ನೋವೊಂದೆಡೆಗೆ. ಕಟ್ಟಕಡೆಗಿವರುಂ ಕೋಪದಿಂದೋಡಿ ದರ್. ಬಯಲ್ಲುಡಿಯಿನೇಂ? ನರಸೇನೆಯುಂ ಸಂಪೂರ್ಣಂ ಸೋಲ್ತುದು.

ಪರಬಲದೊಳ್ ಇಂತು ಸೋಲ್ತರೆಂಬುದನಱಿತು. ರಾಕ್ಷಸಸೇನೆ ಯೊಳೊಂದೆಡೆಗೆ ಆಕೆವಾಳರ ಸಿಂಹನಾದಮುಂ ಮೇಣೊಂದೆಡೆಗೆ ಧನುಷ್ಟಂ ಕಾರಮುಂ ಪೆರ್ಚೆ, ಮುಂಬರಿದು ರಾಘವಸೇನೆಯ ಮೇಲೆ ಸೂರ್ಕಿಂ ನಡೆ ದರ್. ಈಗಳ್ ರಾಮನ ಬಲದೊಳ್ ಮಲೆನಾಡಿಗರ ದಂಡೊಂದುೞಿದು ದು. ಇವರ್ಗಾಳ್ಬಲಕಿರ್ದಂತೆ ಕೈದುಗಳುಂ ಬೞಸಣಂಗಳುಮಿಲ್ಲಂ; ಆದೊ ಡಾಳ್ತನಂ ಪಿರಿದು. ಇಂತಿರಲಿವರ್ ಮೆಲ್ಲನೆ ಅಡಿಯಿಟ್ಟು ಮೆಯ್ಗೊಡದ ರಾವಣಸೇನೆಯಂ ತಡೆದರ್. ಖಳರವರಿವರಂ ಕಾಣುತೊರ್ಮೆ-ಆರೀತಂಗ ಳೆನುತ್ತಚ್ಚರಿಗೊಳ್ವರ್ ; ಒರ್ಮೆ ನೋಡಿ ನಗುವರ್; ಒರ್ಮೆ ಬೆದಱಿಸು ವರ್ ; ಎಂತಾದೊಡಮಿವರಂಜುವರೆ? ಪುಲಿಯಂ ಕಂಡವರ್ ಬೆಕ್ಕಿಗಳ್ಕು ವರೇ? ಇಂತಿರ್ಪನಿತ್ತೋ ರಕ್ಕಸರಂ ಕಂಡಿರ್ಪರ್; ಮಡುಹಿರ್ಪರ್; ಲೆಕ್ಕ ಮಿಲ್ಲಂ. ಬಾಳೆದೋಂಟಮಂ ಪುಗುವಂತೆ ಪೊಕ್ಕು, ಬೊಬ್ಬಿಱಿವರೆಡೆಯೊಳ್ ಟುಗುರ್ಟುತ್ತೆ, ನುಂಗಲೆಂದು ಬಾಯ್ಗಳೆದು ಬಿರ್ಪರಿದಿರೊಳ್ ಪಲ್ಗಿಱಿಯು ತ್ತೆ, ಪಾಱುವರೆಡೆಯೊಳ್ ಕುಪ್ಪಳಿಸುತ್ತೆ, ಕೋತಿವಡೆ ಮೂರ್ಮಲೆತುದು.

ಅರಿಗಳಾನೆಯನೆ ಬಲ್ಪಿಂ ಪಿಡಿದವರಾನೆಗಳ್ಗಿಡುವರ್; ತೇರಿಂ ತೇರಂ ಪೊಯ್ವರ್; ಕಾಲಾಳ್ಗಳಂ ಕಾಲಂ ಪಿಡಿದೆತ್ತಿ ಕಾಲಾಳ್ಗಳ್ಗೆ ಬಡಿ ವರ್; ಪಾಱಿ ಪೋಪರಂ ಬಾಲದಿಂ ಬಿಗಿವರ್. ಇಂತು ನಾಲ್ಗಳಿಗೆಯೊಳೆ ರಕ್ಕಸ ಬಲದೊಳಡ್ಡವಡೆ ನಿದ್ದೆಗೊಂಡುದು. ಉೞಿದ ಬಲಮೆಂತಾನುಮು ಡುಗಿ ಜೀವಂಗೊಂಡು ಪಿಂದಿರುಗಿದುದು.

ಮುನಿಕುಲಲಲಾಮ! "ರಕ್ಕಸವಡೆಯುಮಂ ಆಳ್ಬಲಮುಮಂ ಗೆಲ್ದ ರಾವಣನ ಸೈನ್ಯಮಂ ಕೋತಿವಡೆ ಗೆಲ್ವುದೇ!" ಎಂದಾಡಿಕೊಂ ಡಿರ್ದ ಬರ್ದಿಲರ ಪಡೆ ಮೋನಮಿರ್ದುದು. ದೆಸೆಯಾಣ್ಮರುಂ ಸಂತಸಂ ಗೊಂಡು ಮುಂತೆ ಆಪಿರಿಯರಕ್ಕಸನ ಕಡೆಯಂ ಕಾಯುತಿರ್ದರ್.

ಎಂಬಲ್ಲಿಗೆ ಅದ್ಭುತರಾಮಾಯಣದೊಳ್
ಚತುರ್ದಶಾಶ್ವಾಸಂ ಸಂಪೂರ್ಣಂ.

## ಪಂಚದಶಾಶ್ವಾಸಂ.

ಇತ್ತಲೀವಾರ್ತೆ ಸಹಸ್ರಕಂಠಂಗೆ ಮುಟ್ಟೆ, ಗಾಯದೆಕ್ಕಲನಂತೆ ಕೆರಳ್ದು, ತನ್ನಂ ತಾನಱಿಯದೆ, ಕೆಯ್ಗೊದವಿದಾಯುಧಂಗಳಂ ಪಿಡಿದು, ಕಿಡಿಕಿಡಿವೋಗುತೆ ಬಂದು, ಪರಬಲಮಂ ನೋೞ್ಪುದುಂ; ಕೋಪಂ ತಣ್ಣಗಾದುದೊರ್ಮೆಯೆ. ಮತ್ತಂ ಬಾಯೊಳೆ-''ಆಃ! ಇವರೆಮಗೆ ಸಾಟಿಯಾಗಿ ಬಂದವರ್ಗಡ! ಇವರೆಮ್ಮಂ ಗೆಲ್ದರ್ಗಡ! ಅಲ್ಲದೊಡೆ ಪುೞುವಾನಸರ್ ಇನ್ನೆಗಂ ರಕ್ಕಸರೊಳ್ ಪೊಣರ್ದು ಗೆಲ್ಲಂಗೊಂಡುದುಂಟೆ! ಇದಂತಿರ್ಕೆ. ಕಂಡುದುಂಟೆ? ಇದೇಂ ಕೇಡುಗಾಲವೋ? ಎನಿತಾದೊಡಂ, ನರಗುಱಿಗಳೊಳ್ ಬಿರುದುಳ್ಳರ ಗಂಡಂ ಸಾಸಿರದಲೆಯಂ ಮುಪ್ಪೊೞಲೊಡೆಯಂ ರಾವಣಂ ಕಾದಿದನೆಂದೊಡೆ, ಎನಗೆನಿತ್ತವಮಾನಂ? ಎನಗೊಲ್ದ ಮಾದೇವಂಗೆನಿತ್ತವಮಾನಂ? ಇರ್ಕೆ. ಎಮ್ಮ ಬಳಗಮೆನ್ನಂ ದೂಱದೆ? ಇವರ ನುಡಿಯುಮಂತೆ ಪೋಕೆ! ಅಬ್ಬೆಯೇನೆಂಬಳ್? ಪುಸಿಯಲ್ಲಮೆನ್ನತೋಳ್ಬಲಕಿದೊಂದು ಕುಂದು; ಜಸಕೆ ಕಸಂ. ಏವೆನೀಗಳ್ ಮುಯ್ಯಾಂತು ಕೈದುಡುಕಲ್ ಲೋಕಂ ಜಱೆಗುಂ; ಉಸಿಕನಿರ್ದು ಪಿಮ್ಮೆಟ್ಟಲ್ ಪೞಿಗುಂ,'' ಎನುತಿನಿಸುಂ ಜಾನಿಸುತೆ, ''ಎಂತುಮಿವರಂ ನೋಯಿಸಿದೊಡೆಮಗಪ್ಪ ಐಸಿರಿಯೇಂ? ಅಂತಲ್ತು. ಹಿಃ! ಪೋಕೆ! ಇದರ್ಕೆ ತಕ್ಕುದಂ ಮರ್ದನಱಿವೆಂ'' ಎಂದು ನಿಷಂಗದಿಂ ವಾಯವ್ಯಾಸ್ತ್ರಮನೊಂದಂ ತೆಗೆದು ಶರಾಸನದೊಳ್ ಸಂಧಾನಂಗೆಯ್ದಂ.

ಭಾರದ್ವಾಜ, ರಕ್ಕಸನಾಗಳಂತು ಪೆರ್ಮೆನುಡಿದೊಡಂ ಕಡುಸಾಸಿಸಾಜಂ ಕೇಳ್. ಕೋಲ ಮೈಮೆಯೆಂತುಟೊ! ಬಿಱುಗಾಳಿವೊಯ್ಲ್ಗೆ ಸಿಲ್ಕಿದ ತಱಗೆಲೆಯೊಟ್ಟಿಲಂತೆವೊಲ್ ಕೋತಿವಡೆಯುಮಾಳ್ಬಲಮುಂ, ರಕ್ಕಸದಂಡುಂ, ಲಚ್ಚುಮಣಂ, ಬರತಂ, ಸತ್ರುಗಣಂ, ಅಣುವಂ, ನೀಲಂ, ಜಾಂಬವಂ, ಸುಸೇಣಂ, ಬಿಬೀಷಣಂ ಮುಂತಪ್ಪ ಬೀರರ ಕೂಟಮುಂ, ಬಲ್ಗೋಲ ರಭಸಮಂ ತಡೆಯಲಾಱದೆ ಸುೞಿಸುೞಿದರೆಜಣದೊಳೆ ಕಡ

ಲನಿತಂ ಕಳೆದು, ಮುನ್ನಂ ಪೊಱಮಟ್ಟ ತಮ್ಮತಮ್ಮೆಡೆಯುಂ ಸಾರ್ದುದು. ಆದೊಡಿವರ್ಗದಱಿನೊಂದು ಗುಣಮೆ ತೋರ್ದುದು. ಈ ದೀವಿಯಿಂ ಮರಳ್ದು ತಮ್ಮೆಡೆಗೆ ತಾವೆ ಬಱಿಲ್ದು ಪೋಪುದೊಂದುಱುದುದು. ಅಂತುಂ ಪಗೆಯಾಳ್ಗಳ ಪೆಟ್ಟುಂ ತಪ್ಪಿದುದು. ಈ ತೆಱದೊಳ್ ದಣುವುಮಣಮಿಲ್ಲದೆ ತಮ್ಮೆಡೆಗೆ ಬಂದು ಬೀೞಲೆಲ್ಲರುಂ ತಮ್ಮರವಂ ನೆನೆದಚ್ಚರಿಗೊಳುತೆ, ಬೀಡಂ ಪುಗುವರಾದರ್.

ಇಂತು ರಾಘವಂ ಮೇಣರಸಿ ಜಾನಕಿ ಮತ್ತಂ ವಿಮಾನದೊಳಿರ್ದ ಬಿನದಂಗಾಣ್ಬ ದಿಮ್ಮಿದರಪ್ಪ ರಿಸಿಗಳಲ್ಲದೆ ಪೆಱತುಱದ ಬಲಮೆಲ್ಲಮಡಂಗೆ; ಸಿರಿರಾಮನಚ್ಚರಿಯುಂ, ಜಾನಕಿಯ ಮುಗುಳ್ನಗೆಯುಂ, ತವಸಿಗಳ ಬೆದರ್ಕೆಯುಂ ಪೇೞಲಸದಳವಾಯ್ತು. ಎಂತುಂ ರಾಮಂ ಮನಂಗುಂದಿದನೇ? ಮಱುಚಣದೊಳೆ ಕೋದಂಡಮಂ ಕೊಂಡು, ಪೆದೆಯೇಱಿಸಿ, ಬಿಲ್ದನಿಗೆಯ್ದು ಬೊಬ್ಬಿಱಿಯೆ; ಕೋದಂಡಂ ಒರ್ಮೆಯೆ ಕಂಪನಂಗೊಂಡತ್ತು; ನಿಲಿಂಪರ್-ಕಾವುದೆನುತೆ, ತುತಿಸುತಿರ್ದರ್.

ಪರಬಲದೊಳೆಲ್ಲರ್ಗುಂ ಪಿರಿದು ಜೀವಂ ಪೋದಂತಾಗೆ, ಕಣ್ಗೆಡುವುದುಂ; ಸಹಸ್ರಾಸ್ಯಂ ತಮ್ಮವರಂ—"ಸ್ಥೈರಿಪುದು, ಸ್ಥೈರಿಪುದೆಮ್ಮವರ್. ಎನಿತ್ತಾದೊಡಂ ಪಗೆವಂ ಕುಱಿವಾನಸಂ. ಪೊಳ್ಳುಬೀರಕೆ ಬೆದಱವಲಕಾಶಮಿಲ್ಲಂ. ಎನ್ನಾಳ್ತನಮನಱಿತುಂ ಅಱಿಯದಾದಿರೇಂ? ಮುನಿದೊಡೊರ್ಮೆಯೆ ಕಡಲಂ ಕುಡಿವೆಂ; ಲೋಕಮುಂ ನುಂಗುವೆಂ; ಜವನ ಬಲ್ಪಂ ಜವಂಗಿಡಿಸುವೆಂ. ಆರೆಗಳಿಗೆಯೊಳೆನ್ನ ತೋಳ್ಬಲಮಂ ಪುಚ್ಚವಣಂಗೆಯ್ಯುತಿರ್ಪುದು" ಎಂದು ಸಂತೈಸಿ ರಾಮಂಗಿದಿರಾಗಿ ನಡೆತಂದು, ಮಾಂಕರಿಸುತೆ,—"ಎಲೆ ಮರುಳೆ! ನಿರ್ನೆರಮೆನ್ನೊಳ್ ಕಾದಲೆಂದು ಬಂದೈ. ಈದೀವಿಯುಂ ಲಂಕೆಯೆಂದುಂ, ಎನ್ನಂ ದಶಕಂಠನೆಂದುಂ ಬಗೆಯದಿರ್. ಒಳ್ನುಡಿಯೊರೆವೆಂ. ಮರಳ್ವುದು. ಅಲ್ಲದೊಡೀಸ್ಸುರಗಿಯಿಂ ತಲೆಯಂ ದಿಂಡನುರುಳ್ಚುವಂತುರುಳ್ಚುವೆಂ. ಅಲ್ಲದೊಡಾನೆ ಕಪಿತ್ಥಮನೊಡೆವಂತೆ ಆನೆಗದೆಯಿಂ ವೋದುವೆಂ" ಎಂದಂ. ಇದರ್ಕೆ ರಾಘವಂ ಪಡಿನುಡಿ

ಯೊಳ್—'' ಅಱರಕ್ಕಸ! ಬಾಯ್ಕೊಬ್ಬುರ್ ಎಮ್ಮೊಳಲ್ತು ; ನಿಮ್ಮವರ ಪೌರುಷಮನೆಲ್ಲಮಂ ಬಲ್ಲೆಂ. ಕಡುಗಲಿಯಾದೊಡೆ ಎಮ್ಮೊಳ್ ಕೆಯ್ಬಳಕಮಂ ತೋಱು'' ಎಂಬುದುಂ; ಸಾಸಿರಮೊಗಂ—ರೋಗಿಗೆ ಮದ್ದೊಡಂಬಡದಂತೆ ಎನ್ನನುಡಿ ಮುದ್ದಾಗದಿವಂಗೆನುತೆ, ಕೂರ್ಗಣೆಗಳಂ ತೆಗೆದೆಚ್ಚಂ. ದೊಣೆಯಿಂ ಕಣೆಗಳನೆಂತೆತ್ತುವನೊ ಮತ್ತೆಂತಿಸುವನೊ ಆರ್ಗುಮಱಿಯಲರಿದಾಯ್ತು. ಕೋಲಾಟಮನೇವೇೞ್ವೆಂ! ಸಂಧಾನಂಗೆಯ್ವೆಡೆಯೊಳ್ ತಡೆಯಾದೊಡಂ ಪಾಱುವೆಡೆಯೊಳ್ ತಡೆಯಿಲ್ಲಂ. ಒಂದಱ ಬೞಯೊಂದನೆಚ್ಚೊಡಮಾಕೋಲ್ಗಳೆಲ್ಲಮೊರ್ತಡತರಿಯೆ ರಾಮನಂ ಮುಸುಂಕಿದುವು. ಮಂತ್ರಿಸಿದ ಕೋಲ್ಗಳುಂ ಅಚ್ಚಯಗೋಲ್ಗಳುಂ ಲೆಕ್ಕಕೆ ಬಾರದಾದುವು. ಆದೊಡೇನಕ್ಕುಂ? ಪೊಗರುಗುವ ಕಣೆಗಳ್ ಸಾರ್ತಪ್ಪುದಂ ಕಾಣುತೆ ರಾಘವಂ ಪಡಿಸರಳಂ ತುಡುತೆ ಬಿಡದೋರೊಂದು ಪಗೆಗೋಲಂ ನಡುದಾರಿಯೊಳೆ ಇರ್ಕಡಿಗೆಯ್ವಂ. ಇಂತು ಇರ್ಕೆಯ್ ಇರ್ಛಾಸಿರ ಕೆಯ್ಗಳ್ಗೆ ಸೋಲ್ತುದಿಲ್ಲಂ. ಈಗಳ್ ರಕ್ಕಸನ ನಿಷಂಗದಿಂ ದಿವ್ಯಶರಂಗಳ್ ಪೊಱಮಟ್ಟು ತಮ್ಮಾಸನಂಗಳನೇರ್ದುವು. ಅವುಗಳೊಳೊಂದಱ ಪೆಸರೆಂತೊ ತಾನಱಿಯೆಂ. ನಂಜುಜಾಲೆಯಂ ಸೂಸುತೆ ಪಗೆಯ ನೆತ್ತರಂ ಸವಿವೆನೆಂಬೋಲ್ ನಾಲಗೆಗಳಂ ನೀಡುತೆ ಆಗದ್ದುಗೆಯಿಂ ರೊಯ್ಯನೆ ಅರಿಯ ಇದಿರ್ಗೆ ಪಾಱ ಬಂದುದು. ಸಾಮಿಯ ಮೆಯ್ಮೆ ಪಿರಿದು. ಅನಿತಱೊಳೆಱಂಕೆವೀಸುತೆ ಉದ್ದಮೂಗಿನ ಪಕ್ಕಿಯೊಂದು ತನ್ನ ಪಗೆಯಂ ಕಾಲೊಳೆ ಪಿಡಿದು ಅಂಬರದತ್ತಲಡರ್ದುದು. ಇದಾದೊಡೆ ರಾಘವನೆಚ್ಚ ಗರುಡಾಸ್ತ್ರಮೆಂದು ಕಟ್ಟಕಡೆಗೆ ಬಗೆಯಲ್ ಬಂದತ್ತು.

ಈ ಪರಿಯೊಳ್ ಪರಿಪರಿಯ ದಿವ್ಯಾಸ್ತ್ರಂಗಳ್ ಸಮೆಯಲಿರ್ವರುಂ ಮೆಯ್ಸೋಲ್ತರ್. ರಕ್ಕಸನ ಸಹಸ್ರಮುಖಂಗಳೊಳುಂ ಸೇವೆನೀರ್ ಪುಟ್ಟಿತ್ತು; ಕೆಯ್ಗಳನಿತುಂ ಬತ್ತಿದುವು; ಎರ್ದೆಯೊಳ್ ಗುಡುಗುಟ್ಟಿದುದು; ತೊಡೆಗಳಲುಗಿದುವು; ಮೆಯ್ಯೊಳ್ ಬೞಲ್ಕೆ ತೋರ್ದುದು. ಇಂತಪ್ಪುದುಂ ಖೂಳಂ ಕವರ್ತೆಯಿನಾನುಂ ಗೆಲಲ್ ಬಗೆದಂ. ಇದನಱಿತು ರಾಮಚಂ

ದ್ರುಮಂ–'' ಈತಂ ಎಮ್ಮೊಳಾಟಂ ತೋರ್ಪಂ, ಬರಿದೆ ತಡೆಯಲ್ಬಾರದು''
ಎನುತೆ, ಝುಡಿತಿಯಿಂ ಪಿಂತಗಸ್ತ್ಯನೀತಂಗಿತ್ತ, ರಾವಣಾದ್ಯರಂ ಕೊಂದು ಕಳೆದ ಸಾಯಕಮೊಂದಂ ತೂಣೀರದಿಂ ತೆಗೆದು, ಬಿಲ್ಲನಾಕರ್ಣಾಂತಮೆ ಳೆದು ಪೂಡೆ; ವಿಶ್ವಮೆಲ್ಲಂ ಪಿಂತೆ ರಾವಣವಧೆಯೊಳೆಂತು ತಲ್ಲಣಂಗೊಂ ಡಿತ್ತು, ಅಂತೆಯೆ ಏನುಡಿಯಾಗಿ ಬೆದರ್ದುದು. ದಿಟಮಾಗಿ ರಾಮಬಾಣಕೆ ಪುಸಿಯುಂಟೆ? ನೆಟ್ಟನೆ ಸಹಸ್ರಕಂಠನ ಕಂಠಂಗಳಂ ಕತ್ತರಿಸಲೆಂದು ಜವದಿಂ ಬರುತಿರ್ದುದು. ಆದೊಡೇಂ! ವರದ ಬಲ್ಮೆಯೆಂತುಟೋ! ಆದಾನವಂ ವೇಗ ದಿನದಂ ಪಿಡಿದು ಮುಱಿದು ಮಱುಗಣೆಯಂ ತಲೆದೂಗಿ ಸೆಳೆದಿಡುವುದುಂ; ಆಕೋಲ್ ಮೆಲ್ಲನೆ ರಾಘವನೆರ್ದೆಯಂ ತಟ್ಟಿ ಮಲಂಗಿಸಿ ಮರಳ್ದುದು.

ರಾಘವನಿಂತು ಮೆಯ್ಮಱೆಯಲಮರ್ದುಣಿಗಳೆಲ್ಲರ್ ಹಾಹಾಕಾ ರಂಗೆಯ್ದರ್. ಆಗಳ್ ಬೊಮ್ಮಂ—'' ದೇವತೆಗಳ್ಗೆ ಮರುಳ್ತನಂ ಸಲ್ಲದು. ರಾಘವಂ ನರನಾಟಕದ ಲೀಲೆಯೊಳಿನಿತೊಂದು ಬಿನದಮಂ ತೋಱಿಪಂ ಲೋಗರ್ಗೆ, ಮೇಣರೆಗಳಿಗೆಯೊಳೆ ಪೊಸವೇಸಂ ಬರ್ಪುದುಂಟು. ನೋಡಲ ಪ್ಪುದು,'' ಎನುತೆ ಸಂತೈಸಿದಂ.

ಎಂಬಲ್ಲಿಗೆ ಅದ್ಭುತರಾಮಾಯಣದೊಳ್
ಪಂಚದಶಾಶ್ವಾಸಂ ಸಂಪೂರ್ಣಂ.

---

## ಷೋಡಶಾಶ್ವಾಸಂ.

ಪಗೆಯಂ ಕಾದಿ ಗೆಲ್ದೆನೆಂಬ ಬಿಂಕದಿಂ ರಾವಣಂ ತನ್ನವರ್ವೆರಸು ಮಸಣವಟ್ಟೆಯೊಳ್ ಮರುಳ್ಗಳಿಂ ಕೂಡಿ ನಲಿದಾಡುತಿರ್ಪ ಕಾಳರಕ್ಕಸ ನಂತೆ ಕಣದೊಳ್ ನಲಿದಾಡುತಿರೆ;

ಇತ್ತಲ್ ವಿಮಾನದೊಳಿರ್ದ ಮುನಿಗಳೊಳ್ ಕೆಲರ್ ಈತನ ಬಾಯೊಳ್ ಸಿಲ್ಕಿದೆವೆರೆದು ಮಱುಗುವರ್; ಕೆಲರ್ ತಮ್ಮಂ ಮುಟ್ಟದಂತೆ ದಿಗ್ಬಂಧನಂಗೆಯ್ವರ್; ಕೆಲರ್ ಬರ್ಪುದು ತಪ್ಪದೆನುತುಸಿಕನಿರ್ಪರ್. ಆರ ಮೊಗದೊಳುಂ ಗೆಲವಿಲ್ಲಂ. ಇಂತು ಇರ್ಪುಗುಂದಿದ ಮೊಗಮಂ ದಿಟ್ಟಿ

ಸುತೆ ಸೀತೆ ಕಿಱುನಗೆಬೀಱುವುದುಂ; ತವಸಿಗಳೆಲ್ಲರ್ ದೇವಿಯೊಡನೆ– "ಅಬ್ಬೆ! ಪಿಂತೆ ನೀಂ ಪೇೞ್ದುದಸಿತುಂ ದಿಟಂ. ರಕ್ಕಸಂ ಬಲ್ಲಿದಂ. ನೋಡೌ. ಮೂವಗೆಯ ಬಲಮುಂ ಕಣ್ಗಡ್ಡಮಾದುದು; ಪಡೆವಳರುಂ ಕಡೆಗೊಂಡರ್ ; ಬೀರರುಂ ತೋಱಿರ್ ; ಈಗಳೀರಾಮಂಗಮೀವಿಧಿ ಯಾಯ್ತು. ನೋಡು ನೋಡೌ! ಪವಡಿಸಿರ್ಪಂ. ಕಿವಿಗುಡೌ; ಪರಬಲ ದೊಳರಿಗಳ ಹರಿನಾದಂ ಪಿರಿದಾದುದು. ಬಿಲ್ದನಿಗೆಮ್ಮ ಹರಣಂ ಕಳವಳಿ ವುದು. ಮುಂತೆಮಗೇಂ ಗತಿ ? ಕಾವುದು. ನಿನ್ನನೆ ಮಱವೊಕ್ಕೆವು. ನಿನ್ನನಾದಿಮಾಯೆಯೆಂದುಸಿರ್ವರ್; ಇಂತಿದು ದಿಟಮಾದೊಡೆ ಆಮಾಯೆ ಯಿನೆಮ್ಮಂ ಪೊಱತೊಂದೆಡೆಗುಯ್; ಮೇಣೆಮ್ಮಂ ಮಱೆಗೆಯ್. ನಿನ್ನ ನಾದಿಶಕ್ತಿಯೆಂಬರ್; ಅಂತಿರಲಾಶಕ್ತಿಯಿನೆಮ್ಮಂ ಪೊರೆ. ನಿನ್ನಂ ವಿಶ್ವರೂ ಪಿಣಿಯೆಂಬರ್; ಸಾಜಮಾದೊಡೆಮ್ಮನಾನುಮೆಮ್ಮರಿಗಳನಾನುಂ ವಿಶ್ವ ದೊಂದೆಡೆಯೊಳ್ ಬಯ್ತಿಡು. ಮತ್ತಂ ನಿನ್ನಂ ಸೃಷ್ಟಿಗುಂ, ಸ್ಥಿತಿಗುಂ, ಲಯಕ್ಕುಂ ಕಾರಣಮೆಂಬರ್; ಪುಸಿಯಲ್ಲದೊಡೆ ರಕ್ಕಸರ್ಕಳನನಿತ ರುಮಂ ಕೊಲ್. ಎಂತಾದೊಡಮೆಮ್ಮಂ ಕಾವುದು,'' ಎಂದು ಬಲ್ವ ಗೆಯಿಂ ತುತಿಸುತಿರೆ; ಏನೆಂಬೆಂ! ಎಂತೆಂತು ಭಯದಿಂ ಬೇಡಿಕೊಳ್ವರಂ ತಂತು ಮಾರ್ಪಡುತೆ, ತಿರ್ದಿದ ಕೊಂದಲ್ ನಿಗುರ್ದು ಕೆದರ್ದಿರೆ; ಪೞೆ ನೊಸಲ್ ಪೆನೊರ್ಸಲಾಗೆ; ಎಸಲ್ಗಣ್ ಗುೞಿಗಣ್ಣಾಗೆ; ನಗೆಮೊಗಂ ಉರಿಮೊಗಮಾಗೆ; ಸುಲಿಪಲ್ ನಿಡುವಲ್ಲಾಗೆ; ತಳಿರ್ನಾಲಗೆ ಜೋಲ್ನಾ ಲಗೆಯಾಗೆ; ಸೀತೆ ಕರಾಳಮುಖಿಯಾದಳ್. ಕಕ್ಕಸಮಾದ ತಾಲ್ದೋ ಳುಂ ಕಲ್ಲೆರ್ದೆಯುಂ, ಬಲ್ದೊಡೆಗಳುಂ ಮೊಗಕ್ಕೆ ತಕ್ಕುವಾದುವು. ಗಳದ ರುಂಡಮಾಲೆಯುಂ ಕೆಯ್ಯ ಎಲ್ವುದೊಡವಂ ದಿಟ್ಟಿಸಲಾಗದು. ಇಂತು ಲೋಕೋತ್ತರಸುಂದರಿಯಪ್ಪೀಸೀತೆಯೊಡನೆಯೆ ಅದ್ಭುತರೂಪದಿಂ ಮಾಕಾಳಿಯಾಗಿ ದಿಮ್ಮನೆ ತಿರೆಗೆ ಧುಮ್ಮಿಕ್ಕುತೆ, ಕೋಱೆವಲ್ಗಳ್ ಮಿ ನುಗೆ, ತುಟಿಯಲುಗೆ, ನಾಲಗೆ ನೀಡೆ, ಕಣ್ಬಾಪೆ ಕೊಟಳದಂತೆ ಸುತ್ತೆ, ಸೂಲಂ ಕಡುಗಂ ತಲೆಯೋಡು ಇಂತಿವುಗಳಂ ಪಿಡಿದು, ಪಕ್ಕಿವೇಗದಿಂ ರಕ್ಕಸನೆಡೆಗೆ ಸಾರ್ತಂದಳ್.

ಆದೊಡಿವರಿವರೊಳ್ ಪೊಣೆಯಾದುದಾರುಂ ಕಂಡುದಿಲ್ಲಮಂತು ಮಾಕಾಳಿ ಇದಿರಾದುದುಂ, ರಾವಣನ ಸಾಸಿರಸಿರಂಗಳ್ ತಿರೆಗುರುಳ್ದು ದುಂ ಒಗೆಯಲ್ ಬಂದುದಿಲ್ಲಂ. ಎವೆಯಲುಗುವನಿತಱೊಳೆ ದಾನವನ ಸಹ ಸ್ರಕಂಠಂಗಳುಂ ಗಾಳಿಗೆ ಮಾಂಗಾಯುಧಿರ್ವಂತುದಿರ್ದುವು. ಇಂತಿದಂ ದಿಟ್ಟಿಸುತೆ ಉೞಿದವರೊದಗೆ, ಕೆಲವರಂ ಕೈದುವಿಂ ಕಡಿಕಡಿದೊಟ್ಟಿದಳ್; ಕೆಲರಂ ಪೋೞ್ದಿಳ್ ; ಕೆಲರಂ ಕಾಲ್ವಿಡಿದಪ್ಪಳಿಸಿದಳ್ ; ಕೆಲರಂ ಬೀಸಿಟ್ಟ ಳ್ ; ಕೆಲರಂ ಪೊಡೆಯಂ ತೋಡುತೆ ಕರುಳಿಂ ತೋರದಂಡೆಗೆಯ್ದುಳ್.

ಬೞಿಯಮಾಕಾಳಿ ಮುಂಡದಿನೇರ್ಪಡಿಸಿದ ಗದ್ದುಗೆಯನೇರ್ದಿರೆ; ಬಿನದಕೆ ಆಗವಳ ಪಡಿವರಿಜಿನ ಮಾತೃಕೆಯರ್ ಕೋಟಿಲೆಕ್ಕದೊಳ್ ನೆರೆದು, ನೆತ್ತರೋಕುೞಿಯಾಟಂ, ರುಂಡದಿಂ ಸೆಂಡಾಟಂ, ಎಲ್ವುಗಳಿಂ ಕೋಲಾಟಂ ಮುಂತಪ್ಪ ಆಟವಾಡುತೆ; ಬೞಿಲ್ದೊಡೆ ಮಿದುಳನುಂಡು ಕೆನ್ನೀರಂ ಕುಡಿದು ದಣಿವಾಱಿ, ಮತ್ತಮಿಂತೆಯೆ ಸೊಗಯಿಸುತಿರ್ದರ್.

ಇಂತೀಮಾೞ್ಕೆಯಿಂ ದಾನವರ ಬಳಗಮೆಲ್ಲಮಡಿಯಟಿದು ಪೋ ಗಲ್; ಸೀತೆಯಂ ಪ್ರಸನ್ನಳಾಗಿಸೆ ಬೊಮ್ಮಂ ಮುನಿಗಣಂಬೆರಸು ಬಗೆಬ ಗೆಯೊಳ್ ತುತಿಸಿದಂ :—" ದೇವಿ ! ಈ ನಿನ್ನ ಕಣ್ಣುರಿಯಿನೆ ಮಾಂಸಾ ಶಿಗಳೆಲ್ಲರಱಿದರ್. ಈಗಳಾಯುರಿಯೆ ಲೋಕಮನೆಲ್ಲಮಂ ಸುಡುಗುಂ. ಆದುದಱಿಂ ಪ್ರಸನ್ನಳಾಗು. ನಿನ್ನೀಯದ್ಭುತರೂಪಮಂ ಕಾಣುತೆ ಇದೆ ಕೊಳ್ ! ಮುನಿಗಳೆಲ್ಲರುಂ ಬೆದರ್ಕೆಯಿಂ ನಡುಗುವರ್; ಅವರಂ ಸಂತ ಯಿಸ. ಮುಗಿಲ್ದೇರಂ ಮುಂತಪ್ಪ ದೆಸೆಯೊಣ್ಮರ್ ನಿನ್ನಂ ಪಾಡಿ ಪೊಗ ೞ್ವವರವರನಾರಯ. ಈನಿನ್ನ ಮಾಯೆಯನಾವನಱಿವಂ ? ಕಾವುದುಂ, ಕೊಲ್ವುದುಂ ನೀನೆ ಜಗಮಂ," ಎಂಬುದುಂ; ಸೀತೆ ನಂಬುಗೆಯಂ ತೋರ್ದು ರಾಮನನೆೞ್ಬಿಸುವವೋಲ್ ಸನ್ನೆಗೆಯ್ದುಳ್.

ಆಗಳ್ ನಾಲ್ಮೊಗಂ ರಾಘವನೆಡೆಗೆಯ್ತಂದು ಕೆಯ್ಯಿಂ ತಡವರಿ ಸಲ್, ಕೆಯ್ನೋಂಕಿಂ ನಿದ್ದೆವೋದರುಪ್ಪಡಿಸುವಂತೆ ತಿಳಿದೆೞ್ದಂ ರಾಮಂ. ಇಂತೇೞುತೇೞುತೆ-" ಎತ್ತಲಡಂಗಿದಂ ದುಟ್ಟರಾವಣಂ? ಎನ್ನಯ ಕೋ

ಲ್ಮಱಿದವಂಗೆ ತಕ್ಕುದಂ ತೋಱಿಪೆಂ,'' ಎನುತೆ, ಪುರ್ಬಂ ಗಂಟಿಕ್ಕಿ, ಕೆಲದ ಕೋಯಂಡಮಂ ತುಡುಂಕಿ ಪಿಡಿದಿರ್ದಿರ್ನಿಂದಂ.

ಇಂತು ಬಿರುನೋಟದಿನೆರ್ದು ನೋಲ್ಪವಂಗೆ ರಕ್ತಪಾನಂಗೆಯ್ದು ಗಣಂಗಳೊಡನೆ ನಲಿದಾಡುವ ಅತ್ಯದ್ಭುತರೂಪಮೊಂದು ಕಾಣಿಸೆ, ದಿಟ್ಟ ತನದ ಕಟ್ಟುಡುಗಿ ಮಱೆಗಟ್ಟಿಪೋಗೆ; ರಾಮನ ಕೆಯ್ಯ ಸರಳುಂ ಬಿಲ್ಲುಂ ತನ್ನಿಂ ತಾನೆ ತಿರೆಯೊಳ್ ಬಿಲ್ದಿತ್ತು, ಕಣ್ಮಲರ್ ಮುದಿರ್ದುದು, ಮೆಯ್ಯೊಳ್ ನಡುಕಂ ತೋರ್ದುದು.

ಅನಿತಱೊಳೆ ಬೊಮ್ಮಂ-ರಾಘವಂ ಭಯಂದಾಳ್ದನೆಂದಱಿತು, ಸೀತೆ ಮಾಕಾಳಿಯಾದುದಂ, ಸಾಸಿರದಲೆಯನಂ ಮಡುಹಿದುದಂ, ಮಿಕ್ಕ ರಕ್ಕಸರಂ ಪೋಲ್ದಿದಂ, ಮೇಣೀಗಳ್ ಕಾಳರಕ್ಕಸಿಯರೊಡನೆ ನಲಿದಾಡು ತಿರ್ಪುದಂ ಸವಿಸ್ತರಂ ಮ್ಮೆಮೆಯಂ ರಾಘವಂಗೆ ಬಿತ್ತರಿಸಿದಂ. ಆಗಳ್ ರಾಮಂಗೆ ಮನದ ಬೆದರ್ಕೆ ಎನಸುಂ ಪೆಡಂಮೆಟ್ಟಿ, ಮೆಲ್ಲಮೆಲ್ಲನೆ ಕಣ್ದೆಱೆದು ಮುಂತಿರ್ಪ ಪರಮೇಶ್ವರಿಯಂ ಕಂಡಡ್ಡವಿಲ್ದು-''ಎಲೆ ದೇವಿ, ನೀನಾರೆಂಬುದಂ ಬಗೆಗೊಂಡುದಿಲ್ಲಂ. ಅದಱಿನೆನ್ನೊಳನುಗ್ರಹಿಪ್ಪುದು,'' ಎಂದು ಬಿನ್ನಯಿಸಿದಂ.

ರಘುಪುಂಗವನ ನುಡಿಗೇಳ್ದು ಪರಮೇಶ್ವರಿಯಿಂತೆಂದಳ್:-''ಕೇಳ್ವುದು, ಆಂ ಮಹೇಶನಾಶ್ರಯಂಗೆಯ್ದಿರ್ಪವಳ್. ಎನ್ನಂ ಮಹೇಶ್ವರಿಯೆಂದುಂ, ಆದಿಶಕ್ತಿಯೆಂದುಂ ಕರೆವರ್. ಅನನ್ಯ, ಅವ್ಯಯೆ ಎಂದು ಮುನಿಗಳಿಟ್ಟ ಪೆಸರ್. ಎನ್ನಿರವನೊಂದುಱಿಯದಱಿಯಲ್ ವೇಲ್ಕುಮಾದೊಡೆ, ದಿವ್ಯದೃಷ್ಟಿಯಿಂ ನೋಲ್ಪುದು'' ಎಂದೊರೆದು, ತಾನಂತೆಯಿರ್ದಳ್.

ರಾಘವಂ ಅಂತೆ ನೋಲ್ಪುದುಂ ಸಾಸಿರ ನೇಸರ್ಕಳಂ ಪೞಿವ ಮೆಯ್ಸೊಗರ್, ಕಂಪುಗುವ ಕೊರಳ ಪೂದಂಡೆ, ಪೊಸಬಾವನ್ನದಣ್ಪು, ನಿಱಿವಿಡಿದುಟ್ಟೊಳ್ಳುಡೆಯ ಸೊಗಸು, ತಲೆಯ ಮಗುಡದಂದಂ, ಅಳವಟ್ಟ ಪೊಂದೊಡವುಗಳ ಸಿಂಗರಂ, ಮನಂಗೊಂಡುದು. ಒಂದೆಡೆಯೊಳ್ ಪೊಂಬಸಿಱಂ ಪೊಗೞುತಿರೆ, ಇಂದಿರನೋಲಗಿಸುತಿರೆ, ತುಂಬುರುನಾರದರ್ ಪಾ

ಡುತಿರೆ, ಉಪೇಂದ್ರಂ ಸೂೞಿಱಿತು ಬಿನ್ನಯಿಸುತಿರೆ, ಮಾದೇವಂ ಕಾದಿರೆ ಮೇಣೊಂದೆಡೆಯೊಳ್ ಜವಂ ಕೆಯ್ಗಟ್ಟಿ ನಿಲ್ತಿರೆ, ಬ್ರಹ್ಮಾಂಡಮಂ ವ್ಯಾಪಿಸಿರ್ಪ ಮಾದೇವಿಯ ಮೈಮೆಯಂ ಕಂಡು ಭಯದಿಂ ಭಕ್ತಿಯಿಂ ಸಾಸಿರದೆಂಟುವೆಸರಿಂ ತುತಿಸಿ, ಸೇರೆಗೆಯ್ಯೆತ್ತಿಯಿಂತೆಂದಂ:-''ಎಲೆ ಮಹೇಶ್ವರಿಯೆ! ಈಯದ್ಭುತರೂಪಮಂ ಕಂಡೆನ್ನ ಮನಮಂಜವುದು. ಅದಱಿಂ ಮುನ್ನಿನ ರೂಪಂ ತೋಱಿಸು,'' ಎಂಬುದುಂ; ಪಿಂತಣ ಲೋಕೋತ್ತರಸೌಂದರ್ಯದಿಂ ಮೆಱೆಯುತಿರೆ '' ಇಂದಿಗೆನ್ನ ಜನ್ಮಂ ಪಾವನಮಾದುದು. ನೀನಾದಿಶಕ್ತಿಯೆಂಬುದುಂ ನಿಶ್ಚಯಂ, ಮಹೇಶ್ವರಿಯೆಂಬುದುಂ ನಿಶ್ಚಯಂ, ಪರಮಪ್ರಕಾಶಿಕೆಯುಂ ನೀನೆ, ಕಲ್ಯಾಣಿಯುಂ ನೀನೆ. ಮತ್ತಂ ಸಾಂಖ್ಯಯೋಗದೊಳ್ ಕಪಿಲಯೋಗಮುಂ, ವೇದಂಗಳೊಳ್ ಸಾಮವೇದಮುಂ, ವಿದ್ಯೆಯೊಳಧ್ಯಾತ್ಮವಿದ್ಯೆಯುಂ, ಛಂದಸ್ಸಿನೊಳ್ ಗಾಯತ್ರಿಯುಂ, ಶಕ್ತಿಯೊಳ್ ಮಾಯೆಯುಂ, ಗುಹ್ಯಮಂತ್ರಂಗ್ಗಳೊಳ್ ಓಂಕಾರಮುಂ ನೀನೇ,'' ಎಂದು ಪಾಡಿ ಪೊಗೞ್ದಂ.

ಇಂತು ಬಲ್ವಗೆಯಿಂ ಪೊಗೞ್ವ ರಾಮನಂ ನೋಡುತೆ ಸೀತೆಯಿಂತೆಂದಳ್:-'' ಕೇಳ್ವುದು, ಏರೂಪಿಂ ರಕ್ಕಸರಂ ಮಡುಹಿದೆನಾರೂಪಿಂ ಮಾನಸೋತ್ತರಪ್ರದೇಶದೊಳಿರ್ಪೆಂ. ಆದೊಡೆ ನೀಲಲೋಹಿತರೂಪದಿಂ ನಿನ್ನಂ ಬೞಿಸಲ್ವೆಂ. ಪೇೞು ತೇಂ ನಿನ್ನಯ ಮನದ ಬಯಕೆ?'' ಎಂಬುದುಂ; ''ಈಗಳೆನಗೆ ನೀಂ ತೋರ್ದ ರೂಪೆನ್ನೆರ್ದೆಯಿಂ ಪೋಗಲ್ಬಾರದೆಂಬುದೊಂದು, ಎನ್ನನಗಲ್ದ ವೀರರೆಲ್ಲರ್ ಮಗುೞ್ದೆನ್ನಂ ಸೇರ್ವುದೆಂದೆರಡು, ಎನ್ನ ನಾಡೊಳೇಗಳುಂ ಗೆಲವಿರ್ಪುದೆಂಬುದು ಮೂಱನೆಯ ಬಯಕೆ,'' ಎನೆ; '' ಅಂತಕ್ಕೆ,'' ಎಂದಳ್. ಆಗಳ್ ಆಗಸದತ್ತಣಿಂ ಬಿಡುಗಣ್ಣರ ಭೇರಿ ಮೊೞಗಿತ್ತು; ಅರಲ ಬಲ್ಸರಿ ಸುರಿದತ್ತು.

ಆಗಳ್ ಶ್ರೀರಾಮಚಂದ್ರಮಂ ಸೀತಾದೇವಿವೆರಸು ಋಷಿಗಳ್ ಸಹಿತಂ ಪುಷ್ಪಕಮನೇರ್ದಯೋಧ್ಯೆಯತ್ತಲ್ ತೆರಳ್ವುದುಂ, ಕಣ್ಣೆವೆಯಿಕ್ಕುವನ್ನೆಗಂ ಸರಯೂನದಿ ತೋರ್ದತ್ತು. ಈವಾರ್ತೆ ಪುಟ್ಟಿದೊಡನೆಯೆ

ರಾಮನಂ ಕಾಣ್ಬ ಕೌತುಕದಿಂ ಪುರಜನರೊಡನೆ ಸೋದರರ್ ಇದಿರ್ಗೊಂಡು ಕರೆದುತಂದು ತಮ್ಮಿರವನೋರೊರ್ವರೊಳ್ ಪೇೞ್ದು ಸಂತಸಂಗೊಳುತಿರ್ದರ್.

ಬೞಿಯಮಾಮುನಿಗಳೆಲ್ಲರ್ ರಾಮನನಾಶೀರ್ವದಿಸುತೆ ಆಣತಿವಡೆದು ತಮ್ಮತಮ್ಮೆಡೆಯಂ ಸಾರೆ, ರಾಘವಂ ಸೋದರರಿಂ ಕೂಡುತೆ, ಪಲವುಂ ಪಗಲರಸುಗೆಯ್ಯುತೆ ಸರಯೂತೀರದೊಳ್ ಬಲ್ವಗೆಯೊಳ್ ಜನ್ನಂಗಳನೆಸಗಿ, ಲೋಗರ್ಗೆ ಜನ್ನವೊಗೆಯನೆ ಸಗ್ಗಕೆ ಒಟ್ಟಿಗೆಯ್ದು, ತಾಂ ಮೆಯ್ಗೊಂಡು ನೇಸಱ ಬೞಿಯೊಳ್ ಪುಟ್ಟಿದುದಕಾ–ಒೞಿಯನೆ ಪಾವನಂಗೆಯ್ದಂ ಗಡ !

ಎಂಬಲ್ಲಿಗೆ ಅದ್ಭುತರಾಮಾಯಣದೊಳ್
ಷೋಡಶಾಶ್ವಾಸಂ ಸಂಪೂರ್ಣಂ.

---

ಇಂತೇರ್ಪಟ್ಟ ಅದ್ಭುತರಾಮಾಯಣಮಾನಾವನೊರ್ವಂ ದ್ವಿಜಂ ಶ್ರದ್ಧೆಯಿನೋದುವನವಂ ವಾಗ್ಮಿದನಪ್ಪಂ ; ಆವನೊರ್ವಂ ಕ್ಷತ್ರಿಯನೋದುವನವಂ ರಾಜನಪ್ಪಂ; ಆವನೊರ್ವಂ ವೈಶ್ಯನೋದುವನವಂಗೆ ಸೈಪೊಡರ್ದಪುದು ; ಮೇಣ್ ಶೂದ್ರಂಗೆ ಮಹತ್ವಪ್ರಾಪ್ತಿಯಪ್ಪುದು.

ಎಂದು ಮಹರ್ಷಿಯಪ್ಪ ವಾಲ್ಮೀಕಿ ತಾಂ ಶಿಷ್ಯೋತ್ತಮನೆನಿಪ್ಪ ಭಾರದ್ವಾಜಂಗೆ ಶತಕೋಟಿರಾಮಾಯಣಂಗಳೊಳ್ ಶ್ರೇಷ್ಠಮಾದ ಅದ್ಭುತರಾಮಾಯಣಮಂ ಸವಿಸ್ತರಂ ವಿಸ್ತರಿಸಿದಂ.

ಎಂಬಲ್ಲಿಗೆ ತಿರುಳ್ಗನ್ನಡಿಗನಡಿದಾವರೆಯ ಬಂಡುಣಿಗಳಪ್ಪ ಕನ್ನಡ
ಗಬ್ಬಿಗರ ಮನೆಯೂೞಿಗದವನೊರ್ವಂ ಕನ್ನಡಿಗಂ
ಪೇೞ್ದ ಅದ್ಭುತರಾಮಾಯಣಂ ಸಂಪೂರ್ಣಂ.

# ಅದ್ಭುತರಾಮಾಯಣದ ಟಿಪ್ಪಣಿ.

## — ಪ್ರಥಮಾಶ್ವಾಸಂ. —

ಪುಟ ೧.—ತಿರೆ–ತ್ಸ. ಸ್ಥಿರಾ, ಭೂಮಿ. ಕಳಿವಣ್–ಕಳಿತ (ಪಕ್ವವಾದ) + ಪಣ್, ಹಣ್ಣು. ಪಣ್ಮರಂ–ಹಣ್ಣುಬಿಡುವಮರ. ಪಗಲು ಮಿರುಳು...ನೀರ್ವೂಗಳ್–ಹಗಲಿನಲ್ಲಿ ಅರಳುವ ನೀರ್ವೂ, ಕಮಲಪುಷ್ಪ; ರಾತ್ರಿಯಲ್ಲಿ ಅರಳುವನೀರ್ವೂ, ನೆಯ್ದಿಲೆಹೂವು; ಕಮಲಗಳೂ, ಕುವಲಯಪುಷ್ಪಗಳೂ. ದಿಟ್ಟಿಸಿಮುಟ್ಟುವರ–ಕಣ್ಣಿನಿಂದ ಸ್ಪರ್ಶಮಾಡುವವರ; ನೋಡುವವರ. ಅಘಂಗಳಂ–ಪಾಪಗಳನ್ನು. ಸುಟ್ಟುರಿಪ–ಸುಟ್ಟು + ಉರಿಸು + ವ; ಸಂಪೂರ್ಣವಾಗಿ ನಾಶಮಾಡುವ. ಪೂವಳ್ಳಿ–ಹೂವು ಬಿಡುವ ಬಳ್ಳಿ. ತಣ್ಣೆಱಲ್–ತಣ್ಣಿತು + ನೆಱಲ್; ತಂಪಾದನೆರಳು. ತೆಳ್ಮರ–ತೆಳ್ಳಿತು (ಸಣ್ಣನಾಗಿರುವ) + ಮರ. ತಮ್ಮತ್ತಣಿಂ–ಇಲ್ಲಿ ಅತ್ತಣಿಂ ಎಂಬುದು ಪಂಚಮೀವಿಭಕ್ತಿ ಪ್ರತ್ಯಯ. ಕಿಱುವೆಲರ್–ಕಿಱಿದು + ಎಲರ್ (ಗಾಳಿ), ಮಂದಮಾರುತ. ಕುತ್ತ–ರೋಗ. ಅಱಿಯಿಪ–ನಾಶಮಾಡುವ, ಹೋಗಿಸುವ. ಮರ್ದುಗಿಡ–ಮದ್ದಿನಗಿಡ, ಎಂದರೆ ಈ ಗಿಡದ ಮೇಲೆ ಬೀಸಿದ ಗಾಳಿಯು ಮೈಮೇಲೆ ಬಿದ್ದರೆ ರೋಗಾದಿಗಳು ಗುಣವಾಗುವುವು; ಅಂತಹ ಔಷಧದ ಗಿಡ. ಪಗೆಯುಳಿದ–ಪಗೆಯಿಂ (ಶತ್ರುತ್ವದಿಂದ) + ಉಳಿದ (ಬಿಡಲ್ಪಟ್ಟ), ಒಂದಕ್ಕೊಂದು ಶತ್ರುಗಳಾಗದ. ಮಿಗಗಳು–ಪಶು, ಹುಲಿ, ಆನೆ ಮೊದಲಾದ ಮೃಗಗಳು. ಇಂಚರ–ಇನಿದು + ಸರ; ಮನೋಹರವಾದ ಧ್ವನಿ, ಸರ–ತ್ಸ. ಸ್ವರ. ಇಕ್ಕೆ–ವಾಸಸ್ಥಾನ; ಇಲ್ಲಿ ಗೂಡು ಎಂದಿರಬೇಕಾಗಿತ್ತು; ಇಕ್ಕೆ ಎಂಬುದು ಭೂಚರಪ್ರಾಣಿಗಳ ವಾಸಸ್ಥಾನ; ಪ್ರಾಸಿಗೋಸ್ಕರ ಇಲ್ಲಿ ಇಕ್ಕೆ ಎಂದು

ಉಪಯೋಗಿಸಲ್ಪಟ್ಟಿದೆ. ತೋರ್ಪ–ದೂರದಲ್ಲಿ ಕಂಡುಬರುವ. ತಾಣ–ತ್ಸ. ಸ್ಥಾನ. ಪಟಿಮಾತು–ಪಟಿತು+ಮಾತು; ವೇದ. ನುಡಿಯುತ್ತೆ–ಇಲ್ಲಿ ಹೇಳು ಅಥವಾ ಉಚ್ಚರಿಸು ಎಂಬರ್ಥದಲ್ಲಿ ಉಪಯೋಗಿಸಿದೆ. ಜನ್ನದಾರ–ಜನ್ನದ+ದಾರ (ಸೂತ್ರ), ಯಜ್ಞಸೂತ್ರ, ಎಂದರೆ ಜನಿವಾರ. ಗರವಟದ–ಗ್ರಹಪಟದ. ಸನ್ನಯುಮಂ–ಸೇರ್ವೆಯನ್ನು. ಅಣಿಗೆಯ್ಯುತಿರ್ಪರ್–ಸರಿಮಾಡಿಕೊಳ್ಳುತ್ತಿರುವರು; ಎಂದರೆ ಅರ್ಥವಾಗುವುದಿಲ್ಲ; ಇಲ್ಲಿ ಏನೋ ತಪ್ಪಿರಬೇಕು. ವಟು–ಬ್ರಹ್ಮಚಾರಿ. ಕುಶ–ದರ್ಭೆ. ನಾರುಡೆ–ನಾರಿನಿಂದ ಮಾಡಿದ, ಉಡೆ, ಬಟ್ಟೆ. ಎಣಿತಿರ್ಪರ್–ಲೆಕ್ಕಮಾಡುತ್ತಿರುವರು. ಹದಿಬದೆ–ತ್ಸ. ಪತಿವ್ರತೆ. ನೆಗಳ್ತೆ–ಅವರ ಖ್ಯಾತಿ, ಅಥವಾ ಅವರು ಮಾಡಿದ ಕಾರ್ಯಗಳು. ಬೆಸಗೊಳುತ್ತೆ–ಪ್ರಶ್ನೆಮಾಡುತ್ತ. ಪುತ್ತಿನಣುಗಂ–ಹುತ್ತಿನ ಮಗ; ವಾಲ್ಮೀಕಿ; ಹೇಗೆ ? ಅಣುಗ–ಮಗ, ಇದು ಪ್ರೀತ್ಯರ್ಥದ ಅಣುಗುಶಬ್ದದಿಂದಹುಟ್ಟಿದುದು.

ಪುಟ ೨.—ಅಗ್ಗಳನು–ಸಮರ್ಥನು. ಜೀಯ–ಸ್ವಾಮಿ: ಆಱದುದಱಿಂ–ತೃಪ್ತಿಯನ್ನು ಪಡೆಯದುದರಿಂದ ; ಧಾ. ಆಱ್ ಎಂಬುದರ ನಿಷೇಧರೂಪ, ಆಱದು. ಅತ್ತಣಿಂ–ಆಕಡೆಯಿಂದ; ಅದು ಎಂಬುದರ ಪಂಚಮೀವಿಭಕ್ತಿ. ಇನಿತಂ–ಇಷ್ಟನ್ನು. ಕೂರ್ಮೆ–ಪ್ರೀತಿ; ಧಾ. ಕೂರ್ ಎಂಬುದರ ಭಾವನಾಮ. ಕಿಱುನಗೆವೀಱಿ–ಮಂದಸ್ಮಿತಮಾಡಿ. ಕರತಲಾಮಲಕದಂತೆ–ಅಂಗಯ್ಯ ನೆಲ್ಲಿಯಕಾಯಿಯಹಾಗೆ; ಸ್ಪಷ್ಟವಾಗಿ. ಬಗೆಗೊಡರಲ್–ಮನಸ್ಸಿಗೆ ಬರುವ ಹಾಗೆ. ಚಂದ್ರಮಂ–ತ್ಸ. ಚಂದ್ರಮಾಃ, ಚಂದ್ರನು. ಚಿದಂಬರದೊಳ್ (ಚಿತ್–ಮನಸ್ಸಿನ, ಅಂಬರ–ಆಕಾಶ) ಹೃದಯಾಕಾಶದಲ್ಲಿ. ಒಪ್ಪಿರಲ್–ಎಂದರೆ ಶ್ರೀರಾಮಚಂದ್ರನನ್ನು ಮನಸ್ಸಿನಲ್ಲಿ ಧ್ಯಾನಿಸುತ್ತ. ಒಳ್ಳಿತು–ಚೆನ್ನಾಗಿ. ಬಲ್ಲನಿತು–ತಿಳಿದಷ್ಟು. ವಿಯದ್ಗಂಗಾ–ಸ್ವರ್ಗದಲ್ಲಿರುವ ಗಂಗೆ. ಪೀಯೂಷಕಣಂಗಳ್–ಅಮೃತಬಿಂದುಗಳು. ಶಿವನ ಜಟಾಜೂಟ...ಬಂದು–ಇಲ್ಲಿ ಪೂರ್ವಕಥೆಯೇನು ? ಶಿವನು ಗಂಗಾಧರನಾದ ಕಥೆಯನ್ನು ನೋಡಿ. ಭೂಸ್ವಾಭಾವ್ಯಂ

ಗೊಂಡ-ಭೂಮಿಗೆ ಬಿದ್ದುದರಿಂದ ಭೂಮಿಯ ಸ್ವಭಾವಗುಣವನ್ನು ಹೊಂದಿದ. ಬಾಂಬೊಳ್ಗ-ಬಾನ್ (ಆಕಾಶದ) + ಪೊಳ್ಗ (ನದಿ), ಆಕಾಶಗಂಗೆ. ಮಾನುಷ ಚಾರಿತ್ರಗಂಧಮಂತಾಳ್ದುವು-ವಿಷ್ಣುವು ಮನುಷ್ಯರೂಪದಲ್ಲಿ ಅವತಾರ ಮಾಡಿದುದರಿಂದ ಆ ಚರಿತ್ರೆಗೆ ಮನುಷ್ಯ ಚರಿತ್ರೆಯ ವಾಸನೆಯೂ ಬರುವುದು ಸಹಜ. ಸ್ವಾರಸ್ಯಂಗುಂದಿದ-ರುಚಿ ಕಡಮೆಯಾದ. ಸ್ವರ್ಧುನಿ-ದೇವಲೋಕದ ನದಿಯಾದ ಗಂಗೆ; ಗಂಗಾ ನದಿಗೂ ರಾಮಚರಿತ್ರಕ್ಕೂ, ಸ್ವರ್ಧುನಿಜಲಕ್ಕೂ ಸೀತಾಮಾಹಾತ್ಮ್ಯಕ್ಕೂ ಹೋಲಿಸಿದ್ದರಲ್ಲಿ ಔಚಿತ್ಯವನ್ನು ಯೋಚಿಸಿರಿ. ದ್ರುಹಿಣ-ಬ್ರಹ್ಮ. ಕತದಿಂ-ಕಾರಣದಿಂದ. ಕಾಕುತ್ಸ್ಥ-ಕಕುತ್ಸ್ಥಮಹಾರಾಜನ ವಂಶದಲ್ಲಿ ಹುಟ್ಟಿದ ರಾಮನು.

ಪುಟ ೩.—ಸೃಷ್ಟಿಯ...ಕಾರಣೆಕೆಯುಂ—ಈ ವಿಶೇಷಣಗಳೆಲ್ಲಾ ವೇದಾಂತಾರ್ಥ ವಿಚಾರವಾದುದರಿಂದ ಅವುಗಳ ಅರ್ಥವು ಇಲ್ಲಿ ತಿಳಿಯಬೇಕಾದ ಅವಶ್ಯಕವಿಲ್ಲ. ತತ್ವದರ್ಶಿಗಳ್-ತತ್ವಜ್ಞರು. ಬಿಯ್ತಿಟ್ಟು-(ಹೊಸನ್ನಡ) ಬಿಚ್ಚಿಟ್ಟು. ಹೃದ್ಗ್ರಂಥಿಯುಂ-ಹೃದಯದಗಂಟನ್ನು. ವಿಘಟ್ಟನಂಗೆಯ್ದು-ಒಡೆದು; ಭಗವಂತನನ್ನು ಚೆನ್ನಾಗಿ ಧ್ಯಾನಿಸಿದರೆ ಆ ಧ್ಯಾನಾನಂದದ ಪರಿಪೂರ್ಣತೆಯಿಂದ ಹೃದಯದ ಗಂಟುಬಿಚ್ಚಿಹೋಗುತ್ತದೆ ಎಂದು ಹೇಳುತ್ತಾರೆ; "ಭಿದ್ಯತೇ ಹೃದಯಗ್ರಂಥಿಃ" ಎಂಬುದರೊಡನೆ ಹೋಲಿಸಿರಿ. ಏಗಳ್-ಯಾವಾಗ. ಶಕ್ತಿ-ಜಗತ್ಕಾರಣಳಾದ ಆದಿಶಕ್ತಿಯು. ಪುಟ್ಟಲೆಡೆಯಪ್ಪುದು-ಅವತಾರಕ್ಕೆ ಅವಕಾಶವುಂಟಾಗುತ್ತದೆ. ಎನಸುಂ-(ಅವ್ಯಯ) ಸ್ವಲ್ಪವೂ. ಸ್ವಾಂತ-ಮನಸ್ಸು. ಮುಕ್ತಿಸೀಮಂತಿನಿಯಂ-ಮುಕ್ತಿಯೆಂಬ ಸ್ತ್ರೀಯನ್ನು. ನಿಟ್ಟಿಪರ್-ಎಂದರೆ ಆತ್ಮಾನಂದದಿಂದ ಮುಕ್ತಿಸ್ವರೂಪವನ್ನು ಕಾಣುತ್ತಾರೆ ಎಂದರ್ಥ. ಮಿಳ್ತು-ತ್ಸ. ಮೃತ್ಯು. ಎನಿಪ್ಪಂ-ಎನಿಸುವನು. ಪರಿದಪಂ-ಓಡುತ್ತಾನೆ. ಕಾಲ್ಗ...ಕೇಳ್ದಪಂ-ಇದಕ್ಕೆ ತಾತ್ಪರ್ಯವೇನು? ಜನ್ಮ...ಬಣ್ಣಿಪೆಂ-ಅಂಥವರಿಗೂ ಮನುಷ್ಯಜನ್ಮವುಂಟಾದುದಕ್ಕೆ ಕಾರಣವನ್ನು ಹೇಳುತ್ತೇನೆ.

ಆದಿಶಕ್ತಿಯಾಗಿದ್ದಾಗ ಅರೂಪ, ರಾಮನಾದಾಗ ಸರೂಪ. ಮರ್ತ್ಯರನ ನುಗ್ರಹಿಸಲ್-ಅವತಾರಗಳೆಲ್ಲವೂ ಭಕ್ತರನ್ನು ಅನುಗ್ರಹಿಸುವುದಕ್ಕೋಸ್ಕರವೇ ಎಂದು ವೇದಾಂತಜ್ಞರು ತಿಳಿಸುತ್ತಾರೆ.

---

## —ದ್ವಿತೀಯಾಶ್ವಾಸಂ.—

---

ಪುಟ ೪.—ಎಹಗೆ (ಹೊಸನ್ನಡ) ಹೇಗೆ. ರತ್ನಗರ್ಭೆ-ಭೂಮಿ, ಹೇಗೆ? ಒಗೆ-ಇದಕ್ಕೆ ಹೃದಯ, ರೀತಿ ಎಂದು ಎರಡರ್ಥವಿರುತ್ತದೆ; ಇಲ್ಲಿ ರೀತಿ. ಪೊಡವಿ-ತ್ಸ. ಪೃಥ್ವಿ. ನೇಸರ್ಬಱಿಯ-ನೇಸರ (ಸೂರ್ಯನ) + ಒಱಿಯ (ವಂಶದ); ಸೂರ್ಯವಂಶಕ್ಕೆ ಸೇರಿದ; ಬಱಿ ಎಂಬಪದಕ್ಕೆ-ಬಟ್ಟೆ, ವಂಶ, ಕರೆ, ಲೇಪಿಸುವುದು ಎಂಬ ಅರ್ಥಗಳಿವೆ. ಪಗಲ್-ಹಗಲು; ಇಲ್ಲಿ ದಿವಸಗಳು, ಬಹುಕಾಲ. ಜಂಪತಿ-ತ್ಸ. ದಂಪತಿ, ಗಂಡ ಹೆಂಡಿರು. ಎಱಕಮಿರ್ದರ್-ಎರಕಹಾಕಿದ ಹಾಗೆ ಸೇರಿಕೊಂಡಿದ್ದರು. ನೈರಸ್ಯಂ-ಜಿಹಾಸೆ ; ಆಸೆಯಿಲ್ಲದಿರುವಿಕೆ. ಕತಮಿದಱಿಂ = ಕತಂ+ಇದಱಿಂ-ಈ ಕಾರಣದಿಂದ; ಈರೀತಿಯಾಗಿ ವಿಶೇಷ್ಯ ವಿಶೇಷಣಗಳಲ್ಲಿ ಒಂದಕ್ಕೆ ನಿರ್ದಿಷ್ಟ ವಿಭಕ್ತಿಪ್ರತ್ಯಯವನ್ನು ಹಚ್ಚಿ ಮತ್ತೊಂದಕ್ಕೆ ಸರ್ವ ವಿಭಕ್ತಿಗೂ ಆದೇಶವಾಗಬಹುದಾದ ಪ್ರಥಮೆಯನ್ನು ಸೇರಿಸುವುದುಂಟು; ಉ. "ರನ್ನವೊಂದಂತಳೆದ", "ಭಕ್ತನಂಬರೀಷರಾಯಂಗೆ" (ಪುಟ ೧೦ ನ್ನು ನೋಡಿ). ಬಱಿಯಂ-ಬಳಿಕ, ಆಮೇಲೆ. "ಸರ್ವಂ... ಸಾರಂ"—ಸಮಸ್ತವೂ ಧನದಿಂದ ಹೊಂದಲ್ಪಡುವುದಾದರೂ ಹೆಂಡತಿ ಮಕ್ಕಳು ಮಾತ್ರ ಪೂರ್ವಜನ್ಮದ ಕರ್ಮಾನುಸಾರವಾಗಿ ಸೇರುವರು ಎಂದು ತಾತ್ಪರ್ಯ. ಬಗೆದಂದು-ಯೋಚಿಸಿದಾಗ. ನಾಣ್ನುಡಿ = ನಾಱ್ನುಡಿ—ನಾಡಿನ+ನುಡಿ, ಗಾದೆ. ದುಗುಡ-ದುಃಖ, ವ್ಯಾಕುಲ. ವಿಷಯ—ಈ ಶಬ್ದಕ್ಕೆ ದೇಶ, ಸಂಗತಿ, ರೂಪ ಗಂಧಾದಿಗಳು ಎಂಬ ನಾನಾರ್ಥಗಳಿವೆ. ವಿಭವೋಪೇತಂ-ಐಶ್ವರ್ಯದಿಂದ ಕೂಡಿದವನಾಗಿ. ಅಱಿವಟ್ಟಿಗೆ = ಅಱಿ

(ಧರ್ಮದ) + ಪಟ್ಟಿಗೆ–ಶಾಲೆ; ಧರ್ಮಶಾಲೆ. ಇಂಬು–ಆಶ್ರಯ. ನಂಬಿ· · · ಬೀವಂ–ಇದು ಅಚ್ಯುತ ಶಬ್ದಕ್ಕೆ ವಿಶೇಷಣವಾಗಿ, " ನಚ್ಯಾವಯತಿ ಆಶ್ರಿತಾನ್ " ಎಂಬ ಅವಯವಾರ್ಥದ ತರ್ಜುಮೆಯಾಗಿದೆ.

ಪುಟ ೫.—ಪೆಂಪು–(ಪಿರಿದು ಎಂಬುದರ ಭಾವನಾಮ) ಮಾಹಾತ್ಮ್ಯ. ನಚ್ಚಿನಿಚ್ಚಂ–(ನಚ್ಚಿನ + ಇಚ್ಚಂ) ಪ್ರೀತಿವಿಷಯನಾದ, ಅತ್ಯಂತ ಪ್ರಿಯನಾದ. ಸಚ್ಚಿದಾನಂದ· · · = ಸತ್, ಚಿತ್, ಆನಂದ ಎಂದು ಹೇಳಿಸಿಕೊಳ್ಳುವ; ಭಕ್ತರಕ್ಷಣೋಪಾಯಚಿಂತೆಯನ್ನು ಮಾಡಲು ನಿದ್ರೆಮಾಡುವ ಕಾರಣದಿಂದ ಶೇಷನೆಂಬ ಹಾಸಿಗೆಯಲ್ಲಿ ಮಲಗಿರುವ. ತಾರಕಬ್ರಹ್ಮನಂ–ಪ್ರಣವಸ್ವರೂಪನಾದ ನಾರಾಯಣನನ್ನು. ಉಪೋಷಣ–ಉಪವಾಸ; ಆಹಾರವಿಲ್ಲದಿರುವಿಕೆ. ಪವಡಿಸಿರಲ್–ಮಲಗಿರಲು. ಭಾವಕಿ–ಸ್ತ್ರೀಯು. ಮಾರ್ನುಡಿ–ಪ್ರತಿವಚನ, ಬದಲು. ಆನಂದತುಂದಿಲಸ್ವಾಂತರ್–ಆನಂದದಿಂದ ವ್ಯಾಪ್ತವಾದ ಮನಸ್ಸುಳ್ಳವರು. ಕನಂಬರಿದಂತೆ–(ಹೊಸಗನ್ನಡ) ಕನವರಿಸಿದಂತೆ; ಇದು ಕಲ್ಪಿತರೂಪ. ಚಕ್ರಲಕ್ಷಣಂ–ಶರೀರದಲ್ಲಿ ಚಕ್ರರೇಖೆಯನ್ನುಳ್ಳ. ಏವೇಳ್ವೆಂ–ಏನು ಹೇಳಲಿ? ಉಕ್ಕೈವ–ಉತ್ಸವ; ಈ ಅರ್ಥದಲ್ಲಿ ೧೬ನೆಯ ಶತಮಾನದ ಕೆಲವು ಕಾವ್ಯಗಳಲ್ಲಿ ಮಾತ್ರ ಪ್ರಯೋಗ ಸಿಕ್ಕುತ್ತದೆ; ಪೂರ್ವದ ಪಂಪಾದಿಕವಿಗಳು ಈ ಪದವನ್ನು ಕೈತವ, ಮೋಸ ಎಂಬ ಅರ್ಥದಲ್ಲಿಯೇ ಉಪಯೋಗಿಸಿದ್ದಾರೆ; ಈ ಪದವು ಉತ್ಸವ ಎಂಬುದರ ತದ್ಭವವೆಂಬ ಭ್ರಮೆಯಿಂದ, ಈ ಪ್ರಯೋಗವು, ಉತ್ಪನ್ನವಾಗಿರಬಹುದು. ವಳಕ್ಷಪಕ್ಷ–ವಳಕ್ಷ (ಬಿಳಿಯ) + ಪಕ್ಷ; ಶುದ್ಧಪಕ್ಷ; ವಳಕ್ಷ್ಯ ಎಂಬುದು ಅಶುದ್ಧ.

ಪುಟ ೬.—ಏಕಪಾಠಿ–ಒಂದಾವೃತ್ತಿ ಕೇಳಿದರೆ, ತಿರುಗಿ ಅದನ್ನು ಹೇಳುವ ಸಾಮರ್ಥ್ಯವುಳ್ಳವ ಎಂದರೆ ಅವನಿಗೆ ಇನ್ನೊಂದಾವೃತ್ತಿ ಆದರ ಪಾಠ ಹೇಳಿಕೊಡಬೇಕಾಗಿಲ್ಲ. ಕುಮಾರನಂತೆ–ಷಣ್ಮುಖನಂತೆ. ಚತುರ್ದಶವಿದ್ಯೆ–" ಅಂಗಾನಿವೇದಾಶ್ಚತ್ವಾರೋಮೀಮಾಂಸಾನ್ಯಾಯವಿಸ್ತರಃ । ಪುರಾಣಂಧರ್ಮಶಾಸ್ತ್ರಂಚವಿದ್ಯಾಹ್ಯೇತಾಶ್ಚತುರ್ದಶ ॥"

೪ ವೇದಗಳು, ೬ ಅಂಗಗಳು, ೧ ಮೀಮಾಂಸೆ, ೧ ತರ್ಕ, ೧ ಪುರಾಣ, ೧ ಧರ್ಮಶಾಸ್ತ್ರ ಒಟ್ಟು ೧೪ ವಿದ್ಯೆಗಳು. ಚತುಷ್ಷಷ್ಟಿಕಲೆ—ವೇದಗಳು ೪, ಅಂಗಗಳು ೬, ಶಾಸ್ತ್ರಗಳು ೬, ಸ್ಮೃತಿಗಳು ೧೮, ಪುರಾಣಗಳು ೧೮, ವೀಣಾ, ಗಾಥಾ, ವಿಶ್ವಕರ್ಮ, ಸೂದ, ಭೈಷಜ್ಯ, ಕಾವ್ಯ, ನರ್ತನ, ನಾಟಕ, ಅಲಂಕಾರ, ಕೃತಕ, ಕಳಾ, ಮಹೇಂದ್ರ ಎಂಬ ೬೪ ವಿದ್ಯೆಗಳು. ಪ್ರವೀಣ–ಬುದ್ಧಿವಂತ, ಪಂಡಿತ. ಸೌಶೀಲ್ಯ–ಒಳ್ಳೆನಡತೆ. ಪರಿಣಯ–ಮದುವೆ. ಅಭಿನವ· ·ಯಾದಂ–ಹೊಸದಾದ ಸುಖದ ಚಕ್ರಾಧಿಪತ್ಯಕ್ಕೆ ಅರ್ಹನಾದನು; ಎಂದರೆ ಯಾವ ವಿಧವಾದ ವ್ಯಾಕುಲವನ್ನೂ ಹೊಂದದೆ ನೆಮ್ಮದಿಯುಂಟಾಗಿ ಮಿತಿಮೀರಿದ ಸುಖಾನುಭವವನ್ನು ಮಾಡಿದನು; ರಾಜ್ಯವನ್ನು ಪುತ್ರನಿಗೆ ಒಪ್ಪಿಸಿದ ಮೇಲೆ ಮಹಾಸುಖಿಯಾದನು ಎಂದರ್ಥ. ದಿಗಂತವಿಶ್ರಾಂತಕೀರ್ತಿಯಪ್ಪ–ಇವನ ಯಶಸ್ಸು ದಿಕ್ಕುಗಳ ಅಂತಗಳಲ್ಲಿ ನಿಂತಿತು; ಎಂದರೆ ಎಲ್ಲಾ ಕಡೆಯಲ್ಲಿಯೂ ಖ್ಯಾತಿ ಹೊಂದಿದನು. ಅನುಗ್ರಹ–ಪ್ರೀತಿ. ಹೃತ್ಪುಂಡರೀಕ–ಹೃದಯಕಮಲ. ಬ್ರಹ್ಮ· · ·ನುಂ–ಬ್ರಹ್ಮವಿಷ್ಣು ಶಿವಸ್ವರೂಪನಾದವನು; ಎಂದರೆ ಇವನೇ ಬ್ರಹ್ಮನೂ, ವಿಷ್ಣುವೂ, ಶಿವನೂ ಆದವನು. ಸಾಸಿರಗಾಲಂಬರೆಗಂ–ಸಹಸ್ರವರ್ಷಗಳವರೆಗೆ; ಈ ಗ್ರಂಥಕರ್ತನು, ಕಾಲ ಎಂಬ ಶಬ್ದವನ್ನು ಸಾಮಾನ್ಯವಾಗಿ ವರ್ಷವೆಂಬ ಅರ್ಥದಲ್ಲಿ ಉಪಯೋಗಿಸುತ್ತಾನೆ. ಜಾಂಬೂನದ–ಚಿನ್ನ. ವೈನತೇಯನಂ–ತನಗೆ ವಾಹನನಾದ ಗರುಡನನ್ನು; ಹೇಗೆ? ಗೆಲವಕ್ಕೆ–(ಗೆಲವು+ಆಕ್ಕೆ) ಜಯವುಂಟಾಗಲಿ. ಚೌದಂತ–ಚೌ (ನಾಲ್ಕು)+ದಂತ (ಕೊಂಬುಗಳುಳ್ಳದ್ದು) ಇಂದ್ರನ ಐರಾವತವೆಂಬ ಆನೆ. ತಪಸು–ಇದು ಶ. ಶಾ. ೧೩೩ನೆಯ ಸೂತ್ರದ ಪ್ರಕಾರ ತಪಸ್ಸು, ತಪಂ ಎಂದಾಗಬೇಕು; ಆದರೆ ತಪಸು ಎಂಬ ಅಂತ್ಯದ್ವಿತ್ವವಿಲ್ಲದ ರೂಪವೊಂದುಂಟೆಂದು ತೋರುತ್ತದೆ; ಇದರಂತೆ ಮನಸ್ಸು ಎಂಬುದಕ್ಕೆ–ಮನಸು ಎಂಬ ರೂಪವುಂಟು. ಮೆಯ್ಗಣ್ಣ–ಇಂದ್ರ; ಹೇಗೆ? ಕಿಸುಗಣ್ಚಿ–ಕೋಪಿಸಿ; ರೂಪನಿಷ್ಪತ್ತಿಹೇಗೆ? ಅಮರ್ದು–ತ್ಸ. ಅಮೃತ. ಅಲರ್ವೊಡೆಯ–ಅಲರಂ, ಪೊಡೆ

ಯಲ್ಲಿ (ಹೊಟ್ಟೆಯಲ್ಲಿ, ನಾಭಿಯಲ್ಲಿ) ಉಳ್ಳವನು; ಪದ್ಮನಾಭ, ವಿಷ್ಣು. ಬಿಡೌಜ-ಇಂದ್ರ. ಒನ್ನ-(ತ್ಸ. ಭಗ್ನ) ಕೇಡು.

ಪುಟ ೭.—ತವಸಿ-ತ್ಸ. ತಪಸ್ವಿ. ಜನಾರ್ಧನ-ಜನಗಳಿಗೆ ಕರ್ಮಾ ಸುಗುಣವಾಗಿ ಶಿಕ್ಷೆಯನ್ನು ಕೊಡುವವನು ; ವಿಷ್ಣು. ಮೆಯ್ವೊಗರ್-(ಮೆಯ್ಯ + ಪೊಗರ್) ಕಾಂತಿ. ಪುಷ್ಪವಂತರ್ಗೆ-ಚಂದ್ರಸೂರ್ಯರಿಗೆ. ಪೊಳೆಪು-ಪ್ರಕಾಶ. ನವಿರ್-ಕೂದಲು, ರೋಮ. ವನಜಾಕ್ಷ-ಕಮಲಾಕ್ಷ; ಹೇಗೆ? ಸಂತಸಮುನ್ನೀರ್-ಸಂತೋಷಸಮುದ್ರ ; ಮುನ್ನೀರ್ = ಮುಂದು + ನೀರ್, ಪೂರ್ವದ ನೀರು; ಸಮುದ್ರ. ಪಕ್ಕಿದೇರ-ಪಕ್ಷಿರಥ, ಗರುಡವಾಹನ, ವಿಷ್ಣು. ಮೇಲೆಸಗಯ್-ಮೇಲ್ಮೆಯನ್ನುಂಟುಮಾಡು. ಹವ್ಯವಾಹ-ಅಗ್ನಿ; ಹೇಗೆ ? ಪ್ರಭಂಜನ-ಗಾಳಿ, ವಾಯುದೇವ; ಹೇಗೆ? ಇರ್ಕೆ-ಗತಿಯಿರುವ ಸ್ಥಾನ. ಸಗ್ಗಿಗರ್-ಸ್ವರ್ಗದಲ್ಲಿರುವವರು, ದೇವತೆಗಳು, ಇಲ್ಲಿರುವ ಪ್ರತ್ಯಯಕ್ಕೆ ಅರ್ಥವೇನು ? ಮಾಳ್ಕೆಯಿಂ-ರೀತಿಯಲ್ಲಿ. ಅಸಡ್ಡೆ-ತ್ಸ. ಅಶ್ರದ್ಧೆ. ವೇೞ್ಕುಂ-(ಹೊಸಗನ್ನಡ) ಬೇಕು. ತ್ರಿಕರಣ-ಮನೋವಾಕ್ಕಾಯಗಳು. ಯಜ್ಞಹವನದೇವ-ಅಗ್ನಿ. ಸುದರ್ಶನ-ಚಕ್ರಾಯುಧ. ಇದನ್ನು ವಿಷ್ಣುವು ಶಿವನಿಂದ ಪಡೆದನೆಂದು ಶೈವಪುರಾಣದ ಕಥೆ. ಮೆಚ್ಚು—ಬಹುಮಾನ. ಪಾಱುಂಬಳೆ = ಪಾಱುವ ಬಳೆ, ಚಕ್ರ; ಪ್ರಯೋಗಿಸಲ್ಪಡುವ ಚಕ್ರಾಯುಧ.

ಪುಟ ೮.—ಮೈಮೆ-ತ್ಸ. ಮಹಿಮೆ. ಅಡಂಗಿಪೋಗೆ-ಅದೃಶ್ಯನಾಗಲು, ಈ ಪ್ರಯೋಗವು ಅಶುದ್ಧ, ಹಾಳಾಗಿಹೋಗು ಎಂಬ ಅರ್ಥದಲ್ಲೇ ಇದು ರೂಢಿಯಲ್ಲಿದೆ. ಚಕ್ರಿಶಾಯಿಯಪ್ಪ = ಚಕ್ರಿಯ-ಹಾವಿನ ಮೇಲೆ, ಶೇಷನ ಮೇಲೆ, ಶಾಯಿಯಪ್ಪ-ಮಲಗಿರುವ. ಚಕ್ರಿ-ಚಕ್ರಾಯುಧವೇ ಲಕ್ಷಣವಾಗಿಉಳ್ಳ; ವಿಷ್ಣು. ಚಕ್ರವರ್ತಿ = ಚಕ್ರ-ಸಾಮ್ರಾಜ್ಯಚಕ್ರವನ್ನು, ವರ್ತಿ-ತಿರುಗಿಸುವವನು; ಇಲ್ಲಿ ಚಕ್ರಿ ಚಕ್ರ ಎಂಬುವುಗಳ ಎರಡೆರಡು ಅರ್ಥಗಳನ್ನು ತಿಳಿದುಕೊಳ್ಳಿರಿ.

ಹವ್ಯಕವ್ಯ = ಹವ್ಯ ಎಂದರೆ ಯಜ್ಞಗಳಲ್ಲಿ ದೇವತೆಗಳಿಗೆ ಕೊಡುವ ಆಹಾರ, ಹವಿಸ್ಸು; ಕವ್ಯ ಎಂದರೆ ಶ್ರಾದ್ಧಾದಿಗಳಲ್ಲಿ ಪಿತೃದೇವತೆಗ

ಳಿಗೆ ಕೊಡುವ ಆಹಾರ. ಸಾಲಿಗ್ರಾಮ-ರೂಢಿಯಲ್ಲಿರುವ ಈ ರೂಪ ಅಶುದ್ಧ; ಇದು ಸಾರಿಗ್ರಾವ, ಅಥವಾ ಸಾಳಿಗ್ರಾವ ಎಂದಿರಬೇಕು ; ಏಕೆಂದರೆ, ಸಾರಿಗ್ರಾವ = ಸಾರಿ-ಅರಿ, ಚಕ್ರರೇಖೆಯೊಡಗೂಡಿದ, ಗ್ರಾವ-ಶಿಲೆ; ಪೂಜೆಗೆ ಇಟ್ಟುಕೊಂಡಿರುವ ಚಕ್ರರೇಖೆಗಳೊಡಗೂಡಿದ ಗಂಡಕಿನದಿಯಲ್ಲಿ ಉದ್ಭವವಾಗುವ ಶಿಲೆ; ಸಾಳಿಗ್ರಾವ-ಅಳಿ-ಭ್ರಮರ ದೊಂದಿಗೆ ಕೂಡಿರುವ ಶಿಲೆ; ಶಿಲೆಯ ರೂಪದಲ್ಲಿರುವ ಚಿಪ್ಪಿನೊಳಗೆ ಸ್ವರ್ಣದದುಂಬಿ ಇದೆ ಎಂದು ಪ್ರಸಿದ್ಧಿಯುಂಟು. ಚೆನ್ನೊಪ್ಪಿ = ಚೆನ್ನು-ಸೌಂದರ್ಯ, ಆದರಿಂದ ಒಪ್ಪಿ, ಸೊಗಸಾಗಿ. ಅಗ್ಗಿಮೊಗರು-ಅಗ್ನಿಮುಖ ರಾದ ದೇವತೆಗಳು, ಹಾಗೆ ಹೆಸರು ಬರಲು ಕಾರಣವೇನು ? ಪೊಟಿಲ್-ಪಟ್ಟಣ. ಪ್ರಜೆಗಳೇ··ಆಗೆ-ತಾತ್ಪರ್ಯವೇನು ?

---

## —ತೃತೀಯಾಶ್ವಾಸಂ.—

ಪುಟ ೮.—ಸೈಪಿನಬಿತ್ತು-ಪುಣ್ಯದ ಬೀಜ. ಪಟ್ಟವಣೆ-ಪಟ್ಟದ ಮಣೆ, ಸಿಂಹಪೀಠ, ಸಿಂಹಾಸನ. ಸೆಜ್ಜೆ-ತ್ಸ. ಶಯ್ಯಾ; ಸೆಜ್ಜೆವನೆ-ಶಯ್ಯಾಗೃಹ.

ಪುಟ ೯.—ನಾರದಪರ್ವತರಿಗೆ ಕೊಟ್ಟಿರುವ ಉಪಮಾನಗಳಲ್ಲಿ ಸೊಗಸೇನು ? ಆಗಸ-ತ್ಸ. ಆಕಾಶ. ಅರ್ಘ್ಯಪಾದ್ಯ-ಕೈಗೆ ನೀರು, ಕಾಲಿಗೆ ನೀರು. ಮೆದು-ತ್ಸ. ಮೃದು. ಸನಿಯ-ತ್ಸ. ಸನ್ನಿಹಿತ, ಸಮೀಪ. ಪಱಮೆ-ತ್ಸ. ಭ್ರಮರ; ದುಂಬಿ. ಸರಿಗೊಂಡ-ಹಿಣಿಲು ಹಾಕಿ, ನೀಟ ವಾದ. ಸಿಂಗಾಡಿ-ಧನುಸ್ಸು; ಕಾವನಸಿಂಗಾಡಿಯಂತೆ-ಮನ್ಮಥನ ಬಿಲ್ಲಿನ ಹಾಗೆ ವಕ್ರವಾಗಿ, ಅಷ್ಟು ಮೋಹಕರವಾಗಿ ಇರುವ ಎಂದು ತಾತ್ಪರ್ಯ. ಬಾಯ್ದೆಱೆ = ಬಾಯ + ತೆರೆ; ತುಟಿ. ಕೆಕ್ಕೆ-ಕೆನ್ನೆ ಎಂಬು ದಕ್ಕೆ ಮುದ್ದುಮಾತು. ಬಲಮುರಿಸಂಕು-ಬಲದಕಡೆ ಸುತ್ತು ತಿರಿಗಿರುವ ಶಂಖ. ಸೊಂಡಲ್-ತ್ಸ. ಶುಂಡಾಲ; ಆನೆಯ ಸೊಂಡಲು. ಕೆಚ್ಚನೆಯ

ಮುಂಗೆಯ್ಯುಂ-ಕೆಂಪಗಿರುವ ಮುಂಗೈಯೂ; ಹೀಗೆ ಗುಣವಚನವಾದ ಕೆಚ್ಚನೆ ಶಬ್ದದ ಮೇಲೆ 'ಅನೆಯು' ಪ್ರತ್ಯಯವನ್ನು ಸೇರಿಸುವುದು ವ್ಯಾಕರಣವಿರೋಧ, ಇದು ಅಶುದ್ಧಪ್ರಯೋಗ; ಇದನ್ನು ತಿದ್ದಿದರೆ ಕಿಸುಮುಂಗೆಯ್ಯುಂ, ಅಥವಾ ಕೆಮ್ಮುಂಗೆಯ್ಯುಂ ಎಂದಾಗಬೇಕು. ಗಱಿಹೂ-ತಾಳೆಯ ಹೂ. ಬಡತನ-ಇಲ್ಲಿ ಕಾರ್ಶ್ಯ. ಪೊಱವಾಱ್-ಜಘನ, ಬೆಳ್ಳಗೆ ನುಣುಪಾಗಿ ಕಂಗೊಳಿಸುವ ಕಾರಣ, ಇದನ್ನು ಮಱಲರಾಶಿಗೆ ಹೋಲಿಸಿದೆ. ದಿಂಡು-ಇಲ್ಲಿ ಬಾಳೆಯದಿಂಡು. ಅಚ್ಚಿಜ-ಆಶ್ಚರ್ಯ. ಸಂಕಿಸುತೆ-ಶಂಕಿಸುತ್ತ, ಸಂದೇಹಿಸುತ್ತ. ಕಲಹಾಶನ-ಕಲಹವೇ ಅಶನ (ಆಹಾರ) ವಾಗಿ ಉಳ್ಳವ ಎಂದರೆ ಕಲಹ. ತಂದುಹಾಕದಿದ್ದರೆ ನೆಮ್ಮದಿಯಾಗಿರಲಾರದ ನಾರದನು. ಆರಯ್ಯೆ-ವಿಚಾರಿಸಲು. ಪ್ರದಾನಸಮಯ-ದಾನಮಾಡುವ ಕಾಲ ; ಮದುವೆಯಕಾಲ. ನುಡಿಯಿಂದಂ-ವ್ಯಾಕರಣವಿಶೇಷವೇನು ? ಬಿರ್ದಿನವರಪ್ಪ-ಊಟಕ್ಕೆ ಬಂದ, "ಬಿರ್ದಂದೌತಣಂ" ಶಬ್ದಸಾರ ; ಅರವಿನಲ್ಲಿ "ವಿರಂದು". ನಿಕ್ಕುವ-ನಿಶ್ಚಯ. ಈ ಪುಟದಲ್ಲಿ ಶ್ರೀಮತಿಯ ಅವಯವ ಸೌಂದರ್ಯವು ಮನೋಹರವಾಗಿ ವರ್ಣಿತವಾಗಿದೆ. ಅದನ್ನು ಚೆನ್ನಾಗಿ ಗಮನಿಸಿರಿ.

ಪುಟ ೧೦.—ಎಕ್ಕಟಿಯೊಳ್-ರಹಸ್ಯವಾಗಿ. ಹದನ-ರೀತಿ. ಬಗೆಪರಿಯದು-ಮನಸ್ಸುಹರಿಯುವುದಿಲ್ಲ. ಒಲಿವಳ್-ಇಷ್ಟಪಡುವಳೋ. ಕಜ್ಜ-ತ್ಸ. ಕಾರ್ಯ. ಉಜ್ಜುಗ-ತ್ಸ. ಉದ್ಯೋಗ. ಸಜ್ಜುಗೆಯ್-ಸಿದ್ಧಪಡಿಸುವುದು ಎಂದರ್ಥ; ಸಜ್ಜು ಎಂಬುದು ಸಜ್ಯ ಎಂಬುದರ ತದ್ಭವ ; ಸಜ್ಯ, ಎಂದರೆ ಹೆದೆ ಏರಿಸಿದ; ಬಾಣಪ್ರಯೋಗಕ್ಕೆ ಸಿದ್ಧವಾದ; ಈ ಪದವನ್ನು ಸಿದ್ಧವಾಗಿರುವಿಕೆ ಎಂಬರ್ಥದಲ್ಲಿ ಸಾಮಾನ್ಯವಾಗಿ ಪ್ರಯೋಗಿಸುತ್ತಾರೆ. ಬೀಳ್ಕೊಂಡರ್-ಅಪ್ಪಣೆಹೊಂದಿ ಮನೆಗೆ ಹೊರಟುಹೋದರು. ಬಲಗೊಳ್ವೆಂ—ಇಲ್ಲಿ ಆಶ್ರಯಿಸುವೆನು. ಇನಿಸುಂಪೊೞ್ತು—ಸ್ವಲ್ಪಹೊತ್ತು. ಮಂಕಡ-ತ್ಸ. ಮರ್ಕಟ; ಕಪಿ. ಕುಱುಪು-ಹೊಸಗನ್ನಡ ಗುರುತು.

ಪುಟ ೧೧.—ಎಸಗಲ್‌ವೇೞ್ಕುಂ—ಮಾಡಬೇಕು. ಬಲ್ಪಗೆ = ಬಲ್ಲಿತು + ಬಗೆ, ದೃಢಮನಸ್ಸು. ಈ ಗ್ರಂಥಕಾರನು ಅನೇಕ ಕಡೆಗಳಲ್ಲಿ

ಪಲವಗೆ-ನಾನಾವಿಧವಾಗಿ ಎಂಬರ್ಥದಲ್ಲಿಯೇ ಈ ಮಾತನ್ನು ತಪ್ಪಾಗಿ ಪ್ರಯೋಗಿಸಿರುತ್ತಾನೆ. ಕಿಬ್ಬಿಗೆ = ಕೆಳಗು + ಬಗೆ; ಕೀಳಾದ ಮನಸ್ಸು, ಹೀನಮನಸ್ಸು. ಪದಮೊಲ್ಮೆ-ಪಾದದ ಅನುಗ್ರಹ. ಪವಣಱಿತು-ಸರಿಯಾಗಿ ತಿಳಿದು ; ಪವಣ್--ತ್ಸ. ಪ್ರಮಾಣ; ಹೊಸಗನ್ನಡ ಹವಣು. ಬೇಸಱ್-ಬೇಸರಿಕೆ. ಪುಟ್ಟುಗೆ-ಹುಟ್ಟಲಿ, ಆಗಲಿ. ಗಡಂ-ಆಶ್ಚರ್ಯವಾಚಕಾವ್ಯಯ. ಮಾಧವ = ಮಾ-ಲಕ್ಷ್ಮಿಗೆ, ಧವ-ಪತಿ; ವಿಷ್ಣು. ಇಂಗಡಲ್ = ಇನಿದು + ಕಡಲ್, ಕ್ಷೀರಸಮುದ್ರ; ಹೇಗೆ? ಬಟ್ಟೆ-ದಾರಿ, ಮಾರ್ಗ ಮುಂಗಮುಸುಡು-ಕೋತಿಯ ಮೊಗ.

## —ಚತುರ್ಥಾಶ್ವಾಸಂ.—

ಪುಟ ೧೨.—ಸಾರಣೆಗೆಯ್ದು-ಸಾರಿಸಿ. ಪೂಜಲ್ಲಿಗಳಂ ಬಿಟ್ಟು-ಹೂವುಗಳನ್ನು ರಂಗವಲ್ಲಿಗಳ ಮಧ್ಯೇಮಧ್ಯೇ ಗುಂಪುಗುಂಪಾಗಿ ಮಡಗಿ. ಆಣೆ-ತ್ಸ. ಆಜ್ಞೆ. ಸನ್ನಣ-ತ್ಸ. ಸನ್ನಾಹ. ಗಡುವು-ಗೊತ್ತಾದ ಕಾಲ· ಆಣತಿ-ತ್ಸ. ಆಜ್ಞಪ್ತಿ. ಪಿಡಿನಡೆಯಂತೆ-ಹೆಣ್ಣಾನೆಯ ನಡೆಯಹಾಗೆ, ಮೆಲ್ಲಮೆಲ್ಲಗೆ, ಗಂಭೀರವಾಗಿ. ಉಸಿಕನೆ-(ಅವ್ಯಯ) ಮೌನವಾಗಿ. ಮಾಣ್ದ-ಕಾರ್ಯವನ್ನು ಬಿಟ್ಟಿದ್ದೀಯೆ. ಬೇದಬಜ್ಜಿಗ-ಬ್ರಹ್ಮ; ಹೇಗೆ ? ಮಾದೇವ-ತ್ಸ. ಮಹಾದೇವ, ಈಶ್ವರ. ನಾಡಾಡಿ-ನಾಡಿನಲ್ಲಿ, ಅಲ್ಲಲ್ಲಿ; ಆಡುವ, ಅಲೆದಾಡುವ; ಸಾಮಾನ್ಯರಾದ. ಕಿತ್ತಡಿ-'' ಕಿತ್ತಡಿಯೆಂದು ಜೋಗಿ.'' ಸಂದೆಯ-ತ್ಸ. ಸಂದೇಹ. ಅಣಂ-(ಅವ್ಯಯ) ಸ್ವಲ್ಪವೂ. ಬೊಪ್ಪ-ತಂದೆ.

ಪುಟ ೧೩.—ಆಜಾನುಬಾಹುವುಂ-ಮಂಡಿಯವರೆಗೂ ನೀಟಿರುರುವ, ಉದ್ದವಾದ ತೋಳುಗಳುಳ್ಳವನು. ತುಂಗ-ಎತ್ತರವಾದ. ಉರಸ್ಥಲನುಂ-ಎದೆಯುಳ್ಳವನು. ಕುಂದಕುಟ್ಮಲ-ಕುಂದಪುಷ್ಪದ ಮೊಗ್ಗು. ಕಾರ್ಮುಕ-ಬಿಲ್ಲು. ಸಾಯಕ-ಬಾಣ. ವಿಷ್ಣುವೇ ನಮಗೆ ಅದೃಶ್ಯನಾಗಿ ಅವಳಿಗೆ ಮಾತ್ರ ದೃಶ್ಯನಾಗಿ ಬಂದಿರುವನೆಂಬ ಭಾವನೆಯಿಂದ ಹೀಗೆ

ಶ್ರೀಮತಿಯನ್ನು ಋಷಿಗಳು ಪ್ರಶ್ನೆಕೇಳುತ್ತಾರೆ. ಮಾಯಿಕ–ಮೋಸ, ಇಂದ್ರಜಾಲ. ಎನ್ನತು—ಹೊಸಗನ್ನಡ ಎನ್ನದು. ಮರುಳ್ಗೊಳಲ್—(ಮರುಳಿಂ+ಕೊಳಲ್) ಹುಚ್ಚುಹಿಡಿಯಲು. ಕೊಂಚಂ–ಸ್ವಲ್ಪ. ಸ್ವಸ್ಥಂ–ಸುಮ್ಮನೆ; ಗಲಭೆಮಾಡದೆ. ಪವಣಱಿತು–ಇಲ್ಲಿ ಕಾರಣವನ್ನು ತಿಳಿದು, ಹೇಗೆ?

ಪುಟ ೧೪.—ಎಸಗಿರ್ಪೆ–ಮಾಡಿ ಇರುತ್ತೀಯೆ. ತಾತ–ತಂದೆ. ತಳಮಳ–ಸಂತಾಪ, ಗಾಬರಿ. ಪಜ್ಜೆ–ತ್ಸ. ಪಥ್ಯಾ, ಹಜ್ಜೆ. ನಿರ್ವ್ಯಾಜಂ–ಕಾರಣವಿಲ್ಲದೆ. ಇದೆಕೊಳ್–ಇದೆಕೊ, ಇಕ್ಕೊ, ಇಗೋ ಎಂಬ ರೂಪಾಂತರಗಳು ಕ್ರಮವಾಗಿ ಆಗಿವೆ. ಗುಪ್ತಳಾಗು–ಮರೆಸಿಕೊಳ್ಳುವಳಾಗು. ಒಪ್ಪಂಬೂಸಿದ್ಯೆ–ಒಪ್ಪಹಾಕಿ ಕಳುಹಿಸಿದೆ; ಒಳ್ಳೆಯ ಮಾತಿನಿಂದ ಚೆನ್ನಾಗಿ ಮೋಸಮಾಡಿದೆ. ಅಲಿಲಿಸಿ–ದುಃಖಪಡಿಸಿ. ಬಲಿಲಿಸಲು–ಶ್ರಮಪಡಿಸಲು. ಸಾಲ್ಗುಂ–ಹೊಸಗನ್ನಡ ಸಾಕು. ಪುಸಿಮುನಿಸು–ಸುಳ್ಳಾದ ಕೋಪ. ಸಾಜ–ತ್ಸ. ಸಹಜ.

ಪುಟ ೧೫.—ದೂಱಿಗೆ–ದೂರುವುದಕ್ಕೆ. ಬೇಲ್ಪಿವರ್ಗೆ–ಬೇಡುವವರಿಗೆ. ಆರಿಸಿ–'ವರಿಸಿ' ಎಂದಿದ್ದರೆ ಚೆನ್ನಾಗಿತ್ತು. ಎಮ್ಮತು–ಹೊಸಗನ್ನಡ, ಎಮ್ಮ. ಬಿಂಕ–ಗರ್ವ. ಬರಿಸಿದ–ಬರಮಾಡಿಕೊಂಡ.

ಪುಟ ೧೬.—ಅಟವಟ–ಮೋಸ, ತಟಪಟ. ಎಳಿಸಿದ–ಹಾಸ್ಯಮಾಡಿದ. ತಮೋಜ್ಞ–ತಮೋಗುಣಜನ್ಯವಾದ ಅಜ್ಞಾನ. ಈ ಯೋಗದಿಂ–ಈ ಸಂಬಂಧದಿಂ. ಬವಣೆ–ತ್ಸ. ಭ್ರಮಣ; ಇಲ್ಲಿ ವ್ಯತ್ಯಾಸ, ಕೇಡು. ರಥಾಂಗ–ಚಕ್ರ; ಇಲ್ಲಿ ವಿಷ್ಣುಚಕ್ರ. ತೊಡರ್–ಹಿಂಸೆ. ಉಪದ್ರವವನು–ಹಿಂಸೆಯನ್ನು. ಆಟಕೆ–ನರನಾಟಕಕ್ಕೆ. ಪೆಣ್ಗಾಗುತೆ–ಹೆಣ್ಣಿಗಾಗಿ. ದ್ವಿತೀಯೆ–ಹೆಂಡತಿ.

ಪುಟ ೧೭.—ದುಗುಡ–ದುಃಖ. ತಿಳಿಸಿದಂ–ಶಾಂತಮಾಡಿದನು. ಇಂದಿರೆ–ಲಕ್ಷ್ಮಿ. ಮುನ್ನಮಾರ್ಗಿರ್ದುದವನೊಳ್–ಯಾವನಲ್ಲಿ ಮೊದಲು ಇತ್ತೋ ಅವನಲ್ಲಿ. ಪಿತ್ತಂ–ಇಲ್ಲಿ ಹುಚ್ಚು. ಪ್ರತಿಷ್ಠಾರ್ಥಮುಂ–ಗೌರವ

ವನ್ನು ಕಾಪಾಡಲೋಸುಗ; ಎಂದರೆ ಅವರ ಶಾಪವು ವ್ಯರ್ಥವಾಗದಂತೆ ಆಗುವುದಕ್ಕೆ.

ಪುಟ ೧೮.—ಕುಱಿವಾನಿಸರ್-ಕುರಿಯಂತೆ ಅಜ್ಞರಾದ ಮನುಷ್ಯರು.

—ಪಂಚಮಾಶ್ವಾಸಂ.—

ಪುಟ ೧೮.—ಬಂತಿದೇರ-ಪಂಜ್ತ್ರರಥ; ನೂರಾರು ರಥಗಳುಳ್ಳವನು ಎಂದರ್ಥವಾಗುತ್ತದೆ; ದಶರಥನೆಂದರೆ ಹತ್ತು ದಿಕ್ಕುಗಳಲ್ಲಿಯೂ ತಡೆಯಲ್ಪಡದ ರಥವುಳ್ಳವನು; ಸಮಸ್ತ ದಿಕ್ಕುಗಳನ್ನೂ ಸರ್ವಲೋಕಗಳನ್ನೂ ಜಯಿಸಿದವನು ಎಂದರ್ಥವಾಗುವುದು ಕಷ್ಟ; ಗ್ರಂಥಕರ್ತನು ದಶರಥನೆಂಬ ಅರ್ಥದಲ್ಲಿ ಉಪಯೋಗಿಸಿದ್ದಾನೆ. ಎರಡನೆಯ ಯುಗ-ತ್ರೇತಾಯುಗ. ವಿಷ್ಣುಪರಂ-ವಿಷ್ಣುವನ್ನುಳಿದು ಇತರ ದೇವತೆಗಳನ್ನು ಪೂಜಿಸುವವನಲ್ಲ. ವಿಧಿಯಿಂ-ಸೂತ್ರಕ್ರಮದಿಂದ. ದೈವನ್ಯಸ್ತಭರಂ-ದೇವರಲ್ಲಿ ಮಡಗಿದ ಭಾರವುಳ್ಳವನು; ಎಂದರೆ ದೇವರು ಮಾಡಿದ್ದಾಗಲಿ ಎಂದು ನೆಮ್ಮದಿಯಾಗಿರುವವನು. ತಿರಿಕೂೞ್ = ತಿರಿದುತಂದಕೂಳು-ಅನ್ನ. ಪಡಿಯಾಗಿ-ಪ್ರತಿಯಾಗಿ; ಪಡಿ-ತ್ಸ. ಪ್ರತಿ. ಕೈಯ್ಯೋಗರ = ಕೈಯ + ಓಗರ-ಕೈಯ್ಯ ಅನ್ನ; ಕೈಯತುತ್ತು. ಬವಣೆ-ತ್ಸ. ಭ್ರಮಣ; ಇಲ್ಲಿ ಅಲೆದಾಟ. ದೇಗುಲ-ತ್ಸ. ದೇವಕುಲ. ದೇವಾಲಯ, ಗುಡಿ. ತೂಗುಂಜೊಡರ್ = ತೂಗುವ + ಸೊಡರ್, ಸರಪಣಿಗೆನೇತುಹಾಕಿ ಉರಿಸುವ ದೀವಿಗೆ. ರಂಗವಲ್ಲಿ-ತ್ಸ. ರಂಗಬಲಿ; ಹೊಸನ್ನಡ, ರಂಗೋಲೆ.

ಪುಟ ೧೯.—ಒದವಿದರ್—ಬಂದುಸೇರಿದರು. ಗಾನವಿಜ್ಞಾನ—ಗಾನವಿದ್ಯೆ; ವಿಜ್ಞಾನ, ಜ್ಞಾನ, ಶಬ್ದಗಳಿಗೆ ಅರ್ಥವ್ಯತ್ಯಾಸವೇನು ? ಒರ್ಮೆ-ಒಂದು ಸಲ; ಇಲ್ಲಿ ಪ್ರತ್ಯಯವಾವುದು? ಬಿಜಯ-ತ್ಸ. ವಿಜಯ; ಬಿಜಯಂಗೆಯ್ದು-ದಯಮಾಡಿಸಿ ಬಂದು; ಈ ಅರ್ಥವು ಹೇಗೆ ಬಂದಿತು?

ಒಡೆಯು–ಸ್ವಾಮಿ. ಕಾಣ್ಗೆ–ಕಾಣಲಿ; ಯಾವರೂಪ? ಓರೊರ್ಮೆ = ಒಂದು + ಒರ್ಮೆ–ಒಂದೊಂದು ಸಲ; ವ್ಯಾಕರಣ ವಿಶೇಷವೇನು? ಪೆಱತನ್ಯನಂ–ಬೇರೊಬ್ಬನನ್ನು; ಪೆಱತು–ಬೇರೆ. ತತ್ವರೂಪಮಂ–ತತ್ವದಸ್ವರೂಪವನ್ನು. ಎಂತೊ–ಹೇಗೋ. ಕೊಡಂಕೆ–ಕಿವಿ.

ಪುಟ ೨೦.—ಕನಲ್ದು–ಕೋಪಿಸಿಕೊಂಡು. ಬಲ್ಬನ್ನ = ಬಲ್ಲಿತು + ಬನ್ನ; ವಿಶೇಷವಾದಹಿಂಸೆ; ಗ್ರಂಥಕಾರನು ನಾನಾಹಿಂಸೆ ಎಂಬರ್ಥದಲ್ಲಿ ಪ್ರಯೋಗಿಸಿದ್ದಾನೆ; ಪ್ರ. ಬಲ್ಬಗೆ. ಎಂದಿನೋಲ್–ಎಂದಿನಹಾಗೆ. ಮೆಯ್ಯ್ಯಾಱಿಯೆ–ಸಾಯಲು. ಸತ್ಯಲೋಕ–ವಿಷ್ಣುವಿನ ಲೋಕ. ವಿಧಿ–ಬ್ರಹ್ಮ, ಶಾಸ್ತ್ರವಿಧಾನ. ಹಿರಣ್ಯಗರ್ಭ–ಬ್ರಹ್ಮನು; ಅವಯವಾರ್ಥವೇನು ? ಶ್ವೇತ ದ್ವೀಪ–ಕ್ಷೀರಸಮುದ್ರಮಧ್ಯದಲ್ಲಿರುವ ಬೆಳ್ಳಗಿರುವ ದ್ವೀಪ; ಇದೇ ವಿಷ್ಣು ಲೋಕವೆಂಬುದು. ನೆಱೆವರ್–ಸಮರ್ಥರಾಗುವರು; ' ನೆರೆ,' 'ನೆಱೆ' ಈ ಧಾತುಗಳಿಗೆ ಅರ್ಥವ್ಯತ್ಯಾಸವೇನು? ಸೊನ್ನೆ–ತ್ಸ. ಸ್ವರ್ಣ–ಚಿನ್ನ; ಮತ್ತೊಂದರ್ಥವೇನು ? ' ಅಗ ', ' ಅದು ' ಏತರತದ್ಭವ? ಬೆಲೆವಣಿ–ಬೆಲೆಯುಳ್ಳ ಮಣಿ; ರತ್ನಗಳು. ಇರ್ಛಾಸಿರ = ಎರಡು + ಸಾಸಿರ. ಮಾಸೇಸ–ಮಹಾ ಶೇಷ; ಆದಿಶೇಷ. ಬಜ್ಜರ–ತ್ಸ. ವಜ್ರ. ಮೊಗವಾಡ–ಮುಂಭಾಗದ ಲೋವೆಗಳು. ಕಲ್ಯಾಣರೂಪಂ–ಮಂಗಳಸ್ವರೂಪನಾದ ವಿಷ್ಣುವು. ಸಿಂಹಾಸನಾಸೀನಂ–ಸಿಂಹಾಸನದಲ್ಲಿ ಕುಳಿತು. ವಿಷ್ಣುಚಿನ್ನಸಮಾಪನ್ನರ್—ವಿಷ್ಣುವಿನಗುರುತನ್ನು ಎಂದರೆ ವಿಷ್ಣುವಿನ ಹಾಗೆ ನಾಲ್ಕುತೋಳು ಕಿರೀಟ, ವಸ್ತ್ರಮೊದಲಾದುವನ್ನು ಹೊಂದಿರುವವರು. ಅಷ್ಟಾಶೀತಿ ಸಹಸ್ರ–೮೮೦೦೦. ದಿಂಡುಗೆಡೆದರ್ = ದಿಂಡು–ಮೆಯ್ಯನ್ನು, ಕೆಡೆದರ್–ಬೀಳಿಸಿದರು, ಎಂದರೆ ನಮಸ್ಕರಿಸಿದರು.

ಪುಟ ೨೧.—ಪೊಂಬಸಿಱ–ಹಿರಣ್ಯಗರ್ಭ; ಬ್ರಹ್ಮ. ಪೋೞ್ದು ಕೊಂಡಂ–ಹೋಳಾಗಿ ಮಾಡಿಕೊಂಡನು ಎಂದರ್ಥವಾಗುತ್ತದೆ; ಇಲ್ಲಿ ಕತ್ತರಿಸಿಕೊಂಡನು ಎಂಬ ಅರ್ಥದಲ್ಲಿ ಉಪಯೋಗಿಸಿರುವುದು ಸಮಂಜಸವಾಗಿಲ್ಲ. ಗಣಾಧಿಪ–ವಿಷ್ಣುಗಣಗಳಿಗೆ ಅಧಿಪನು. ಸಾಮೀಪ್ಯಪದವಿ–

ಸಮೀಪದಲ್ಲಿಯೇ ಅಧಿಕಾರ. ಸಾಲೋಕ್ಯ-ಸಮಾನವಾದ ರೂಪ; ವಿಷ್ಣುವಿನ ಹಾಗೆ ದಿವ್ಯವಾದ ಸುಂದರವಾದ ಶರೀರವನ್ನು ಪಡೆದಿರುವಿಕೆ.

---

## ಷಷ್ಠಾಶ್ವಾಸಂ.

ಪುಟ ೨೧.—ಸಾನ್ನಿಧ್ಯ-ಸಮೀಪ. ಅರ್ತಿ-ಆಸೆ. ವಿಪಂಚೀಗುಣತತ್ವಜ್ಞರ್-ತಂತಿಯಗುಣದ ಸ್ವರೂಪವನ್ನು ತಿಳಿದವರು; ವೀಣಾವಾದ್ಯನಿಪುಣರು. ಸೂೞಱಿತು-ಸಮಯವನ್ನು ತಿಳಿದು; ಹೇಗೆ ಹಾಡಿದರೆ ಸೊಗಸಾಗುವುದೋ ಅದನ್ನು ತಿಳಿದು. ಮೆಲ್ಪು-ಮಾರ್ದವ; ಹಿತ. ತನಿಸೊದೆ—ತನಿತು + ಸೊದೆ; ಮಧುರವಾದ ಅಮೃತ; ಸೊದೆ-ತ್ಸ. ಸುಧಾ. ಇನಿದಂ-ಮಧುರತ್ವವನ್ನು. ಒಳ್ಪು = ಒಳ್ಳಿತರ ಭಾವ; ಸೊಗಸು. ಚೇಟಿಯರ್-ಹೆಣ್ಣಾಳುಗಳು. ಕಂಬಿ-ಕೋಲು, ಆಜ್ಞಾದಂಡ, ಸೋಟಾ ಎಂದು ಹೇಳುವರು. ಪಡಿಯಱತಿ-ಬಾಗಿಲುಕಾಯುವ ಹೆಣ್ಣಾಳುಗಳು; ಪಡಿಯಱನ ಸ್ತ್ರೀ; ಪಡಿಯಱ-ತ್ಸ. ಪ್ರತೀಹಾರ; ಆಳು. ಪಡಿವಳರು-ಪ್ರತೀಹಾರಿಗಳು.

ಪುಟ ೨೨.—ಬಿನದ-ತ್ಸವಿನೋದ. ಅಲರಿಜಂ = ಅಲರಿನಲ್ಲಿ—ಹೂವಿನಲ್ಲಿ, ಜನಿಸಿದವನು; ಬ್ರಹ್ಮ; ಹೇಗೆ? ಇಲ್ಲಿ ಜನಿಸಿದನೆಂಬ ಅರ್ಥದಲ್ಲಿ 'ಇಜ' ಪ್ರತ್ಯಯ ಬಂದಿದೆ. ಮುಗಿಲ್ದೇರ-ಮೇಘವನ್ನೇ ರಥವನ್ನಾಗಿ, ವಾಹನವಾಗಿ ಉಳ್ಳವನು; ಇಂದ್ರ. ಬಿಡುಗಣ್ಣರ್-ಬಿಟ್ಟಕಣ್ಣುಳ್ಳವರು; ಅನಿಮೇಷರು, ದೇವತೆಗಳು. ನಾಲ್ಮೊಗನಣುಗ-ನಾರದನು; ಹೇಗೆ? ಅಪ್ಪುದು—ಹೊಸಗನ್ನಡ ಅಹುದು; ಧಾತುವೇನು ? ಅಣ್ಮಂ-ಸ್ವಾಮಿ. ಎಸಿತರವರ್-ಎಷ್ಟರವರು; ಯೋಗ್ಯರಲ್ಲ ಎಂದರ್ಥ. ಮಾನಪೂರ್ವಕಂ-ಸಗೌರವವಾಗಿ. ಪಾರಿತೋಷಿಕಮಂ-ಬಹುಮಾನವನ್ನು. ಅಂಚೆದೇರ-ಹಂಸರಥ; ಬ್ರಹ್ಮ; ಅಂಚೆ-ತ್ಸ. ಹಂಸ. ಅವನಣುಗನು ಯಾರು? ಬೇಗುದಿಗುದಿದು-ಬೇಯುವಾಗ ನೀರು ತಳಮಳವಾಗಿ ಕುದಿಯುವ ಹಾಗೆ ಕುದಿದು; ಇಲ್ಲಿ ಬಹುವಾಗಿ ವ್ಯಥೆಪಟ್ಟು, ತಳಮಳಿಸಿ. ನಾಣಿಲಿ-ನಾಚಿಕೆ

ಯಿಲ್ಲದ್ದು ಯಾವುದೋ ಅದು; ಹೇಯವಾದ ಎಂದರ್ಥ. ಬಹುವ್ರೀಹಿಯ ಸಮಾಸದಲ್ಲಿ ಪರಪದವು 'ಇಲ್ಲ' ಎಂದಿದ್ದರೆ ಕಡೆಯಕ್ಷರಕ್ಕೆ 'ಲಿ'ತ್ವ ಬರುತ್ತದೆ. ಮತ್ತೊಂದು ಉ. ಪಲ್ + ಇಲ್ಲ, ಯಾವುದಕ್ಕೋ ಅದು ಪಲ್ಲಿಲಿ. ಪಿಂಮೆಯ್-ಪೂರ್ವಜನ್ಮ. ನೋಂತನೋ-ವ್ರತಾಚರಣೆಯನ್ನು ಮಾಡಿದನೊ. ಏಱಿಪಂತೆ-ಅಪಹಾಸ್ಯ ಮಾಡುವ ಹಾಗೆ. ಅಟ್ಟಿಸಿದಳ್-ಇಲ್ಲಿ ಓಡಿಸಿದಳು; ಅರ್ಥಾಂತರ, ಅಡಿಗೆ ಮಾಡಿಸಿದಳು. ಅಬ್ಬೆ-ಹೊಸಗನ್ನಡ ಅವ್ವೆ, ತಾಯಿ. ಅಚ್ಚರರ್-ಅಪ್ಸರಸ್ಸುಗಳು; ದೇವತೆಗಳು. ಅೞಲಿದರ್-ದುಃಖಿಸಿದರು. ಮುಪ್ಪೊೞಲ್ = ಮೂಱು + ಪೊೞಲ್ (ಲೋಕ), ಸ್ವರ್ಗ, ಮರ್ತ್ಯ, ಪಾತಾಳಗಳು.

ಪುಟ ೨೩.—ಮಾಲಕುಮಿ-ತ್ಸ. ಮಹಾಲಕ್ಷ್ಮಿ. ತೊದಳ್-ಸುಳ್ಳು. ಬೇೞ್ಪೆಂ-ಹೊಸಗನ್ನಡ ಬೇಡುವೆನು. ಪಡಿ-ತ್ಸ. ಪ್ರತಿ. ನೆತ್ತರ್-ರಕ್ತ. ಪಗೆಯುೞಿವ-ಹಗೆಬಿಟ್ಟು ಅನ್ಯೋನ್ಯವಾಗಿರುವ. ಕೋೞ್ಮಿಗ = ಕೋಡುಳ್ಳ, ಕೊಂಬಿರುವ, ಮಿಗ-ಮೃಗ ; ಇಲ್ಲಿ ಹಾಯುವ ಎತ್ತು ಮುಂತಾದುವು. ದಾರುಣಮೆನುತೆ-ದಾರುಣವೆಂದು ಹೇಳಿ. ಹೃಷಿಕೇಶ-ಇಂದ್ರಿಯಗಳಿಗೆ ಈಶನಾದ, ಮನುಷ್ಯನ ಅಂತಃಪ್ರವೃತ್ತಿಯೆಲ್ಲಾ ಭಗವದಧೀನವಾಗಿರುವ ಕಾರಣ, ವಿಷ್ಣು. ಪೊರ್ದುಗೆಯಾಗದು-ಹೊಂದುವಣೆಯಾಗುವುದಿಲ್ಲ. ನೀಡುಂ-(ಅವ್ಯಯ) ಹೆಚ್ಚಾಗಿ, ಬಹಳವಾಗಿ. ಚಾಗ-ತ್ಸ. ತ್ಯಾಗ, ದಾನ, ಇತರರಿಗೆ ದಾನಕೊಡುವುದು. ಭೋಗ-ತಾನು ಅನುಭವಿಸುವುದು; ದಾನಮಾನ, ಧರ್ಮಕರ್ಮ, ನಡೆನುಡಿ, ಬಿಜ್ಜೆಬಿನ್ನಣ-ಇವುಗಳಿಗಿರುವ ಅರ್ಥವ್ಯತ್ಯಾಸವೇನು ? ಲೆಕ್ಕಿಸದಲ್ಲಂ-ಅಲಕ್ಷ್ಯಮಾಡಲಿಲ್ಲ. ಲೀಲಾವಿನೋದಕೆ-ಕ್ರೀಡಾರ್ಥವಾಗಿ, ಮನುಷ್ಯನಾಗಿ ಸಂತೋಷಪಡುವುದಕ್ಕೆ. ಸಾಯ-ತ್ಸ. ಸಹಾಯ.

ಪುಟ ೨೪.—ಅನ್ನೆಯ-ತ್ಸ. ಅನ್ಯಾಯ. ಪೊರೆವುದು-ಕಾಪಾಡುವುದು. ಪ್ರತಿಷ್ಠಿತನಪ್ಪ-ಪ್ರಸಿದ್ಧನಾಗುವ ಹಾಗೆ. ಉಲೂಕ-ಗೂಗೆ. ಪರಿವೇಷ್ಟಿತನಾದ-ಸುತ್ತಲ್ಪಟ್ಟ, ಸುತ್ತಲೂ ಕುಳಿತುಕೊಂಡಿರುವ. ಭಕ್ತಿಮಿಗೆ-

ಭಕ್ತಿಯು ಹೆಚ್ಚಾಗಲು. ಮಣೆ-ಪೀಠ. ನಿರ್ನೆರಂ-(ಅವ್ಯಯ) ನಿಷ್ಕಾರಣವಾಗಿ. ಜಪ, ತಪ-ಇವುಗಳಿಗೆ ಅರ್ಥವ್ಯತ್ಯಾಸವೇನು ? ಸಡ್ಡೆ-ತ್ಸ. ಶ್ರದ್ಧೆ. ಪಾಡುಮ್ಮೈಮೆ = ಪಾಡಿನ-ಹಾಡುಗಾರಿಕೆಯ, ಮಹಿಮೆ. ಪಾಸಟಿ-ಸದೃಶವಾದುದು. ಇರುವುಮಂ-ಇರುವಿಕೆಯನ್ನು, ಸ್ಥಿತಿಯನ್ನು.

ಪುಟ ೨೫.-ಎನ್ನಯುಪರಿಯನುವಂ-ನನ್ನ ಸ್ಥಿತಿಯ ರೀತಿಯನ್ನು; ಪರಿಯನುಮಂ ಎಂದಿದ್ದರೆ ಶುದ್ಧವಾಗಿದ್ದಿತು. ಸತ್ಪಾತ್ರಂಗಳೊಳ್—ಯೋಗ್ಯರಾದವರಲ್ಲಿ. ಎರೆಯ-ಸ್ವಾಮಿ. ತುೞಿಲ್ಗೆಯ್-ಇಲ್ಲಿ ತುೞಿಲ್-ಸೇವೆ ಅಥವಾ ಸ್ತೋತ್ರವನ್ನು, ಗೆಯ್-ಮಾಡು. ತಮಿಳಲ್ಲಿ ತುಳಿಲ್ ಎಂಬುದಕ್ಕೆ ತೊಳಿಲ್. ಪಕ್ಕಾಗುವರ್-ಪಾತ್ರರಾಗುವರು; ಶಿಕ್ಷಿಸಲ್ಪಡುವರು. ತುೞಿಲಾಳ್ಗಳ್-ಇಲ್ಲಿ ಶೂದ್ರರು; ತುೞಿಲ್-ತಮಿಳು ಭಾಷೆಯಲ್ಲಿ ತೊೞಿಲ್ ಎಂದರೆ ಸೇವೆ, ಅಥವಾ ಕೆಲಸ. ಷೋಡಶೋಪಚಾರಗಳು-ಯಾವುವು ? ಕಟ್ಟಾಣತಿ-ಇದಕ್ಕೆ ವಿಗ್ರಹವಾಕ್ಯವೇನು ? ವಿಧಿಯಂ-ಸಂಗೀತಶಾಸ್ತ್ರರೀತ್ಯಾ. ಕಾಲಧರ್ಮ-ಸಾವು, ಹೇಗೆ ? ಎಂತುಂ-ಯಾವ ಪ್ರಕಾರದಲ್ಲಿಯೂ. ಸೈಸದೆ-ಸಹಿಸದೆ. ತಿನಿಸು-ಆಹಾರ. ಮುಮ್ಮೆಯ್ಯ-ಪೂರ್ವಜನ್ಮದ. ಸೈಪಿನೆಸಕ-ಪುಣ್ಯಕಾರ್ಯ, ಪುಣ್ಯಪ್ರಭಾವ. ಜವ-ತ್ಸ. ಯಮ. ಬೆಸಗೊಂಡುದು-ಗೂಗೆಯಾದುದರಿಂದ ಕ್ರಿಯಾಪದವು ನಪುಂಸಕಲಿಂಗದಲ್ಲಿದೆ.

ಪುಟ ೨೬.—ಉಣಿಸು-ಆಹಾರ. ಈ ಬನ್ನಮಂ-ಈ ಕಷ್ಟವನ್ನು. ಕಾಲಂ-ಯಮನು. ಮುನ್ನಿನ ಒಡಲಂ-ಹಿಂದಣ ರಾಜಶರೀರವನ್ನು. ಪಡಲಿಟ್ಟುದು-ಸತ್ತುಹೋಯಿತು, ಇಲ್ಲಿ ನಷ್ಟವಾಗಿಹೋಯಿತು. ದಂಡಧರ-ಯಮನು, ಹೇಗೆ ? ಸೊಣಗ-ತ್ಸ. ಶುನಕ, ನಾಯಿ. ಸವನಿಸುವನ್ನೆಗಂ-ಅಣಿಮಾಡುವಷ್ಟರಲ್ಲಿ. ಗಾಳಿದೇರು-ವಿಮಾನ. ಬೆಂಗದಿರ = ಬೆಚ್ಚನೆ + ಕದಿರ್-ಕಿರಣವುಳ್ಳವನು; ಸೂರ್ಯ.

ಪುಟ ೨೭.—ಕುನ್ನಿ-ನಾಯಿ. ಗಾನಯೋಗ-ಸಂಗೀತಪ್ರಾಪ್ತಿ; ಇಲ್ಲಿ ಸಂಗೀತವಿದ್ಯೆ.

## —ಸಪ್ತಮಾಶ್ವಾಸಂ.—

ಪುಟ ೨೭.—ಗಾನಬಂಧು-ಸಾಮಾನ್ಯವಾಗಿ 'ಬ್ರಹ್ಮಬಂಧು' ಇತ್ಯಾದಿ ಪದಗಳಲ್ಲಿ 'ಬಂಧು' ಎಂಬುದನ್ನು ಹೀನಾರ್ಥದಲ್ಲಿ ಉಪಯೋಗಿಸುತ್ತಾರೆ; ಇಲ್ಲಿ ಗಾನದಲ್ಲಿ ಪ್ರೀತಿಯುಳ್ಳವನು ಎಂಬರ್ಥದಲ್ಲಿ ಉಪಯೋಗಿಸಿದೆ. ಗಾಣಬಿಜ್ಜೆ-ತ್ಸ.ಗಾನವಿದ್ಯಾ. ಒಳಗಲ್ಲಂ-ಒಳಗಾಗಿಲ್ಲ; ಸಾಧ್ಯವಿಲ್ಲ. ಶ್ರಮದಿನುಂ = ಶ್ರಮದಿಂ + ಉಂ-ಶ್ರಮದಿಂದಲೂ; ಇಲ್ಲಿ 'ಉಂ' ಎಂಬುದು ಸಮುಚ್ಚಯಾವ್ಯಯ; ಹೀಗೆ ಸಮುಚ್ಚಯಾವ್ಯಯವನ್ನು ಸೇರಿಸುವುದು ರೂಢಿಯಲ್ಲಿಲ್ಲ; ಹಳಗನ್ನಡದಲ್ಲಿ ಶ್ರಮದಿಂದೆಯುಂ ಎಂದಿರಬೇಕು. ಸಾಸ್ತ್ರ-ತ್ಸ. ಶಾಸ್ತ್ರ. ನಾಣ್ಚಿಕೆ-(ಹೊಸಗನ್ನಡ) ನಾಚಿಕೆ. ಕೆಯ್ದಿರಿಪಿ-ಕೈಯನ್ನು ತಿರಿಗಿಸಿ. ಕಿಱುವಾಯ್ಗೆಯ್ದು-ಇಲ್ಲಿ ಬಾಯೋರೆ ಮಾಡಿ.

ಪುಟ ೨೮.—ಗಾಯನ-ಇದು ತಪ್ಪು; ಗಾನ ಎಂದಿರಬೇಕು; ಈ ಗ್ರಂಥಕಾರನು ಭ್ರಮಿಸಿ ಅನೇಕಕಡೆ ಈ ರೂಪವನ್ನು ಉಪಯೋಗಿಸಿದ್ದಾನೆ. ಕಾಣ್ಬುದುಂ-ನೋಡಿಕೊಳ್ಳುವುದೂ ಈ ಅರ್ಥದಲ್ಲಿ ಈ ಧಾತುವನ್ನು ವಿಶೇಷವಾಗಿ ಉಪಯೋಗಿಸುವುದಿಲ್ಲ. ಪೆಱತೆಣಿಕೆ-ಬೇರೆಕಡೆ ಯೋಚನೆ. ನೀರಟ್ಕೆ-(ಹೊಸಗನ್ನಡ,) ನೀರಡಿಕೆ; ದಾಹ. ಏಟ್ಬಿಗೆಗೆ-ಏಳುರೀತಿಗೆ. ಪಾಡುಪಾಡಾಗದು-ಗಾನವು ವಶ್ಯವಾಗುವುದಿಲ್ಲ; ಇಲ್ಲಿ ಎರಡನೆಯ ಪಾಡುಶಬ್ದವು ಕೈಗೆ ಸಲ್ಲುವುದು ಎಂಬರ್ಥದಲ್ಲಿ ಬಂದಿದೆ; ಈ ಪ್ರಯೋಗವು ಕನ್ನಡದಲ್ಲಿ ರೂಢಿಯಲ್ಲಿಲ್ಲ; ತಮಿಳಲ್ಲಿದೆ. "ಇಂತು ದೋಷಂಗಳಂ ನಿರ್ಣಯಿಸಿ(=ನಿಶ್ಚಯಿಸಿ) ಪಾಡಲ್ತಕ್ಕುದು" ಎಂದರೆ ತಾತ್ಪರ್ಯವೇನು? ಭೇದಾಭೇದಂಗಳಂ ತಿಳಿಪಿ-ಯಾತರಲ್ಲಿ ಯಾವುದು ಎಂಬುದನ್ನು ಗೊತ್ತಾಗಿ ಹೇಳಲಿಲ್ಲ. ದಿವ್ಯಸಾಹಸ್ರ-ದೇವಮಾನದಲ್ಲಿ ಸಾವಿರ. ಧ್ವಾಂಕ್ಷಶತ್ರು-ಕಾಗೆಗಳಿಗೆ ಶತ್ರು; ಗೂಗೆ. ಈಮೇಲ್ಗೆ-ಈ ಪಾಂಡಿತ್ಯದ ಮಹಿಮೆಗೆ. ಏಂಪಡಿ-ಏನನ್ನು ಪ್ರತಿಯಾಗಿ.

ಮೇಲ್-ಮುಂದೆ. ಎನ್ನತ್ತಣಿಂ-ನನ್ನ ದೆಸೆಯಿಂದ ಆಗತಕ್ಕುದು. ಪಕ್ಷಿರಾಜ-ಸಾಮಾನ್ಯವಾಗಿ ಗರುಡ ಎಂಬ ಅರ್ಥದಲ್ಲಿ ಬರುತ್ತದೆ; ಇಲ್ಲಿ ಗೂಗೆರಾಯ. ಮನುಗಳ್-ಇಲ್ಲಿ ಮನ್ವಂತರಗಳು ಎಂದರ್ಥ. ಸಂಪ್ಲವ-ಪ್ರಳಯ. ಸಾಯುಜ್ಯಪದಂ-ಮೋಕ್ಷವು.

ಪುಟ ೨೯.—ಬೀಡು-ಮನೆ; ತಮಿಳಲ್ಲಿ ವೀಡು. ಎಚ್ಚಱಾಗೆ-ಎಚ್ಚರವಾಗಲು, ಹೆಚ್ಚಾಗಲು; ಎಂದರೆ ಅತ್ಯಾಶ್ಚರ್ಯವಾಗುವಂತೆ. ಪೆಱಗಾಲ್-ಹೆಳಗಾಲು. ಕುಡುಗೆಯ್-ಕೊಂಕು (ವಕ್ರವಾದ) + ಕೆಯ್. ಏಱೆರ್ದೆ-ಎತ್ತರವಾದ ಎದೆ; ಉಬ್ಬಾದ ಎದೆ; ಅಥವಾ ಹುಣ್ಣಾದ ಎದೆ. ಪೇರೊಡಲ್-ಪಿರಿದು + ಒಡಲ್-ದಪ್ಪಹೊಟ್ಟೆ. ರಾಗಂಮೇಣ್‌ರಾಗಿಣಿಗಳ್-ಗಂಡುರಾಗಗಳೂ, ಹೆಣ್ಣುರಾಗಗಳೂ. ಪೆರ್ಚಳಿಕೆ-ಗರ್ವ, ಹೆಮ್ಮೆ. ಪಾಡು-ಕಷ್ಟ; ನಾನಾರ್ಥವೇನು ? ಭಿನ್ನಸಂಧಿ-ಮಧ್ಯ ಮಧ್ಯದಲ್ಲಿ ಸ್ವರವನ್ನು ಬಿಟ್ಟುಬಿಟ್ಟು. ಛಿನ್ನಭಿನ್ನ-ಕತ್ತರಿಸಲ್ಪಟ್ಟು, ಬೇರೆಯಾಗಿ. ಕಮಲಿನಿ-ಕಮಲದ ಬಳ್ಳಿ. ಮರಲ್ದು-ಹೂಬಿಟ್ಟು; ಮರಳ್ದು ಮರಲ್ದು ಎಂಬುವುಗಳಿಗೆ ಅರ್ಥವ್ಯತ್ಯಾಸವೇನು ? ಪರಿವಿಡಿಯಿಂ-ಕ್ರಮವಾಗಿ. ಎಣೆ-ಸದೃಶ, ಸಮಾನ, ಪಾಸಟಿ.

ಪುಟ ೩೦.—ಯೋಗಸಾಧನೆಯಂತೆವೋಲ್-ಕಷ್ಟಪಟ್ಟು ಯೋಗವನ್ನು ಸಂಪಾದಿಸುವ ಹಾಗೆ. ಯಥಾಮತಿ-ಬಲ್ಲನಿತು; ಬುದ್ಧ್ಯನುಸಾರ. ಸ್ಸೈಪಿಟ್ಟು-ಸಂತೈಸಿ, ಸಮಾಧಾನಪಡಿಸಿ. ಬೀಣೆಬಿನ್ನಣಿಗ-ವೀಣಾವೈಜ್ಞಾನಿಕ; ಬಿನ್ನಣ-(ತ್ಸ. ವಿಜ್ಞಾನ) + ಇಗ. ಎಣಿತೆ-ಇಲ್ಲಿ ಏನರ್ಥ ? ಜತನ-ತ್ಸ. ಯತ್ನ. ಗಾನಯೋಗ-ಗಾನವಿದ್ಯೆ; ಸಂಗೀತಶಾಸ್ತ್ರ. ಪೆರ್ಮೆವಿಟ್ಟು-ಹೆಮ್ಮೆಯ ಬೀಜ. ಕೆಮ್ಮನೆ-ಸುಮ್ಮನೆ. ಬಗೆಗೊಂಡು-ಮನಸ್ಸಿನಲ್ಲಿಟ್ಟುಕೊಂಡು; ಯೋಚಿಸಿಕೊಂಡು. ಬಾರಿ-ಸಲ. ನಾಣ್-ನಾಚಿಕೆ. ಮುಮ್ಮಡಿ-ಮೂರು + ಮಡಿ-ಮೂರರಷ್ಟು. ಕಿಱುಮನ-ಕಿರಿದು + ಮನ, ಮನಸ್ಸಂಕೋಚ, ಲಜ್ಜೆ. ಮಡುಹಿ-ಕೊಂದು ತಿಣ್ಣ-ತ್ಸ. ತೀಕ್ಷ್ಣ, ಇಲ್ಲಿ ಭಾರ. ತವಿಸೆ-ಕಡಮೆಮಾಡಲು. ಮೆಯ್ಗೊಂಡು-ಶರೀರವನ್ನು ತೆಗೆದುಕೊಂಡು; ಅವತಾರ ಮಾಡಿ.

ಪುಟ ೩೧.—ಜಾಂಬವತಿ-ಜಾಂಬವಂತನ ಮಗಳಾದ ಕೃಷ್ಣನ ಹೆಂಡತಿ; ಕರಡಿಮೊಗದವಳು.. ಒರ್ಕಾಲಂ-ಒಂದುವರ್ಷ; ಈ ಗ್ರಂಥ ಕಾರನು ಕಾಲಶಬ್ದವನ್ನು ವರ್ಷ ಎಂಬ ಅರ್ಥದಲ್ಲಿ ಬಹುಕಡೆ ಉಪಯೋಗಿಸುತ್ತಾನೆ; ಇದಕ್ಕೆ ಪ್ರಯೋಗವನ್ನು ಹುಡುಕಬೇಕಾಗಿದೆ. ಸವೆಯೆ-ಕಳೆಯೆ. ಪುಚ್ಚವಣಾ-ಪರೀಕ್ಷೆ. ಎರ್ದೆಗೊಡರಿಲ್ಲಂ-ಮನಸ್ಸಿಗೆ ತೆಗೆದುಕೊಳ್ಳಲಿಲ್ಲ; ಕರುಣಿಸಲಿಲ್ಲ. ಸಾಸ-ತ್ಸ. ಸಾಹಸ. ಏಱುಂಮನಂ-ಏಱುವ+ಮನಂ; ಕೊಬ್ಬುತಿದ್ದ ಮನಸ್ಸು. ಸೊರ್ಕು-ಗರ್ವ. ಸಿರ್ಕುಗೊಂಡುದು-ಸಿಕ್ಕಾಗಿಹೋಯಿತು; ಗೋಜಿಹೋಯಿತು; ಇಲ್ಲದಂತಾಯಿತು. ಅಮೇಯಂ-ದಿಕ್ಕುಕಾಲ ಮೊದಲಾದುವುಗಳಿಂದ ಅಳತೆಮಾಡುವುದಕ್ಕೆ ಆಗದವನಾದ. ನೆರವಾದಂ-ಸಹಾಯವಾದನು. ಬ್ರಹ್ಮಾನಂದ-ಬ್ರಹ್ಮದೇವನ ಆನಂದ; ಅತ್ಯಧಿಕವಾದ ಆನಂದ. ದಿಟಮನಮುಂ-ದೃಢನಿಶ್ಚಯವನ್ನು; ಛಲವನ್ನು. ಬಗೆಗೊಂಡು-ಇಲ್ಲಿ ಮೆಚ್ಚಿ. ಅಹಂಕೃತಿ-ಗರ್ವ. ಒಡರ್ಪುದು-ಬರುವುದು. ಮಚ್ಚರ-ತ್ಸ. ಮಾತ್ಸರ್ಯ; ಹೊಟ್ಟೆಗಿಚ್ಚು. ಭಗೀರಥಪ್ರಯತ್ನಕಂ-ಭಗೀರಥನು ಗಂಗೆಯನ್ನು ಭೂಲೋಕಕ್ಕೆ ತರಲು ಪಟ್ಟ ಕಷ್ಟದ ಹಾಗೆ ಕಷ್ಟಪಟ್ಟರೂ; ಬಹು ಶ್ರಮಪಟ್ಟರೂ; ಇಲ್ಲಿ ಪೂರ್ವಕಥೆಯೇನು? ಕೂರ್ಮೆಗಡಲ್-ಪ್ರೀತಿಯೆಂಬ ಸಮುದ್ರ. ಐಸೆ-ಅಲ್ಲವೆ! ಹರಿಯ ಕೂರ್ಮೆ···ಡೈಸೆ!—ತಾತ್ಪರ್ಯವೇನು? ಲೋಗರ್-ಲೋಕದಜನರು. ಪರಮೇಶನಂ-ಸರ್ವಸ್ವಾಮಿಯಾದ ಹರಿಯನ್ನು. ಕಟ್ಟುಂಬಗೆಯಿಂ-ಕಟ್ಟುವಮನಸ್ಸಿನಿಂದ; ಭಕ್ತಿಯಿಂದ. ಅಱುವಗೆ = ಆರು + ಪಗೆ, ಅರಿಷಡ್ವರ್ಗ; ಕಾಮ, ಕ್ರೋಧ, ಲೋಭ, ಮೋಹ, ಮದ, ಮಾತ್ಸರ್ಯಗಳು. ಸಮ್ಮಣ-ತ್ಸ. ಸನ್ಮಾನ; ಈ ರೂಪವು ಬಹು ಅಪರೂಪ. ಹರಿಯೊಲ್ಮೆಯಿನೆ-ಹರಿಯೊಲ್ಮೆಯಿಂ + ಎ; ಹರಿಯೊಲ್ಮೆಯಿಂದಲೆ.

## — ಅಷ್ಟಮಾಶ್ವಾಸಂ. —

ಪುಟ ೩೨.—ದೀವಿ-ತ್ಸ. ದ್ವೀಪ. ಸಂದ-ಪ್ರಸಿದ್ಧನಾದ. ಈರೈ ಮೊಗಂ = ಎರಡು + ಐದು-ಹತ್ತು; ಮೊಗಗಳು ಉಳ್ಳವನು; ದಶಶಿರನು. ಮುದಿಪಱವುಂ-ಮುಪ್ಪೂ ಸಾವೂ. ಪೌಲಸ್ತ್ಯ-ಪುಲಸ್ತ್ಯನಮಗ. ಪುಣ್ಯ ಭೂಮಿ-ವಿಂಧ್ಯಕ್ಕೂ ಹಿಮವತ್ಪರ್ವತಕ್ಕೂ ಮಧ್ಯದಲ್ಲಿರುವ ದೇಶ; ಆರ್ಯಾ ವರ್ತದೇಶ. ತವಿಸೈ-ನಿಲ್ಲಿಸಯ್ಯ; ಧಾತು, ತವು-ಕ್ಷಯೇ. ಕಾಲ್ಗೆರಗು-ನಮಸ್ಕರಿಸು. ಕೈಗೂಡಿದತ್ತು, ಬೇಳ್ಪೆಂ (ಬೇಡುವೆನು), ಈ ರೂಪಗಳ ನಿಷ್ಪತ್ತಿ ಹೇಗೆ? ಸರ್ವಾಮರತ್ವ-ಸರ್ವವಿಧವಾದ ಅಮರತ್ವ; ಯಾವ ವಿಧವಾದ ಸಾಯುವಿಕೆಯನ್ನೂ ಹೊಂದದಿರುವಿಕೆ.

ಪುಟ ೩೩.—ಎಣಿಕೆಯಿಂ-ಇಲ್ಲಿ ಯೋಚನೆಯಿಂದ, ಆಲೋಚಿಸಿ. ಪಿತಾಮಹ-ಬ್ರಹ್ಮ. ಓರಂತೆ-ಒಂದು + ಅಂತೆ, ಒಂದೇತೆರನಾಗಿ. ಎಣೆ ವಾರರು-ಸದೃಶರಿಲ್ಲ. ಬೀರ-ತ್ಸ. ವೀರ್ಯ; ಪರಾಕ್ರಮ. ಬರ್ದಿಲರ್-ಬರ್ದು (ಮರಣವು) + ಇಲರ್-ಇಲ್ಲದವರು; ಅಮರ್ತ್ಯರು; ದೇವತೆಗಳು. ಕನ್ನೆವೆಣ್ಗಳ್-ಕನ್ಯಕಾಸ್ತ್ರೀಯರು; ದೇವಕನ್ನಿಕೆಗಳು. ಅಚ್ಚರಿಯರ್-ಅಪ್ಸರಸ್ತ್ರೀಯರು. ಒಚ್ಚತಂ-ಹಿತವಾಗುವಂತೆ, ಪ್ರ. " ಒಚ್ಚತಮೂಳ್ವ ಕೋಗಿಲೆ" ಪಂಪ. ಕೀೞೆಳೆ-ಕೞಿಗು + ಎಳೆ-ಅಧೋಭುವನ; ಪಾತಾಳ. ಗದ್ದಿಸು-(ಹಳಗನ್ನಡ) ಗದ್ದರಿಸು. ಭಂಡಾರ-ತ್ಸ. ಭಾಂಡಾಗಾರ. ಎಣ್ದೆಸೆ-ಎಂಟು + ದೆಸೆ. ಆಣ್ಮರಂ-ಅಧಿಪತಿಗಳಾದ ಅಷ್ಟದಿಕ್ಪಾಲಕರನ್ನು. ದಾೞಿಯಿಡುತೆ-ಮುತ್ತಿಗೆಹಾಕುತ್ತ; ದಾೞಿ-ತ್ಸ. ಧಾಟಿ; ಎಂದ ರೇನು? ಉಪಟಳ-ತೊಂದರೆ. ಪೆಱತೇಂ-ಮತ್ತೇನು? ಮುದಿಪಾರ್ವರ್-ಮುದಿಹಾರುವರು; ಪಾರ್ವ ಎಂದರೆ-ಬ್ರಾಹ್ಮಣ; ವೇದವನ್ನು ನೋಡು ವವನು. ಮೆಯ್ಯುಚುರ್ಚುತ-ಮೆಯ್ಯನ್ನು ಚುಚ್ಚುತ್ತ; ಚುರ್ಚು ಎಂಬು ದಕ್ಕೆ ಈ ಅರ್ಥದಲ್ಲಿ ಹಳಗನ್ನಡದಲ್ಲಿ ಪ್ರಯೋಗವು ಬಹಳ ಕಡಮೆ; ಚುರ್ಚು-ದಾಹೇ, ಸುಡು ಎಂಬ ಅರ್ಥದಲ್ಲಿಯೇ ಪ್ರಯೋಗವಿದೆ.

ಪುಟ ೩೪.—ಕೆನ್ನೀರ್-ಕೆಚ್ಚನೆ + ನೀರ್; ರಕ್ತ. ಒಟ್ಟೈಸಿ-ಒಟ್ಟುಗೂಡಿಸಿ; ಒಂದಾಗಿಸೇರಿಸಿ; ಇದಕ್ಕೆ ಈ ಅರ್ಥದಲ್ಲಿ ಹೀಗೆ ಪ್ರಯೋಗವಿಲ್ಲ. ಗೆಲ್ಲ-ಗೆಲ್ ಎಂಬ ಧಾತುವಿನ ಭಾವರೂಪ; ಜಯ. ನಂಜುನೆತ್ತರ್-ವಿಷಮಯವಾದರಕ್ತ. ತುಡುಗೊಂಡು-ತುಡುಕುಗೊಂಡು; ಒಂದೊಂದು ತುಡುಕಾಗಿ ಎಂದರ್ಥ; ಅಥವಾ ತುಡುಗುಗೊಂಡು-ಕಳ್ಳತನದಲ್ಲಿ ಸ್ವೇಚ್ಛೆಯಾಗಿ, ಒಬ್ಬರನ್ನೂ ಕೇಳದೆ, ಎಂದು ಮತ್ತೊಂದು ಅರ್ಥವನ್ನೂ ಮಾಡಬಹುದು. ಪೆಱವೆಣ್-ಪರಸ್ತ್ರೀ. ಎಱಕಂಗೊಂಡು-ಪ್ರೀತಿಮಾಡಿ. ಪುರುಡು-ಹುರುಡು, ಮಾತ್ಸರ್ಯ. ನಿಚ್ಚ-ತ್ಸ. ನಿತ್ಯ. ಓಪಂ-ಭರ್ತಾ; ಗಂಡನು. ತಾನಿರ್ದುಂಪಾಡೇ-ತಾನಿದ್ದೂ ಕಷ್ಟವೇ ? ಬೞಿಗುಂ-ವಂಶಕ್ಕೂ. ಖಂಡಮಾಣಿಕ್ಯ-ಕೆಂಪಿನ ಕಮಲ; ಈ ಪದವು ಕವಿಯು ಬಹಳ ಆಧುನಿಕನೆಂಬುದನ್ನು ತೋರಿಸುತ್ತದೆ.

ಪುಟ ೩೫.—ಕಡಂದುಱುಗೂಡು-ಕಣಜದಗೂಡು. ಬಾವಱಿದು ಬಲ್ಲುವಣ್ಣಾದುದು-ಈ ದೃಷ್ಟಾಂತದ ಸಾಮಂಜಸ್ಯವನ್ನು ಯೋಚಿಸಿರಿ. ಯಾತ್ರಾರ್ಥಂಪೊಱಮಟ್ಟಳ್-ಈ ಸಂದರ್ಭದಲ್ಲಿ ಹೀಗೆ ಹೇಳಿರುವುದು ಉಚಿತವಾಗಿಲ್ಲ. ಪೇೞಿಗೆ-ತ್ಸ. ಪೇಟಿಕೆ; ಪೆಟ್ಟಿಗೆ. ಬಾಯ್ದೆಱೆಯಲಚ್ಚರಿಗೆ-ಅತ್ಯಂತಾಶ್ಚರ್ಯವಾಗಲು. ಪುತ್ತಳಿ-ತ್ಸ. ಪುತ್ರಿಕಾ; ಗೊಂಬೆ. ಬಾನ್ನುಡಿ-ಆಕಾಶವಾಣಿ. ಸಪ್ತಾಂಗದೊಳ್, ರಾಜ್ಯಮುಮಂ ಕಾಣಾತೆ-ಸ್ಥಿರವಾಗಿಕಂಡು; ಎಂದರೆ ಸಪ್ತಾಂಗವನ್ನು ಭದ್ರಪಡಿಸಿ; ರಾಜ್ಯಸ್ಥಾಪನೆ ಮಾಡಿ ಎಂದರ್ಥ. ಅದಕ್ಕೆ ವಿವರ—"ತನ್ನಮೆಯ್ಯೊಳ್ ಬಲನೆನಿಪ್ಪ ಅರಸು, ವಿಶ್ವಾಸದಿಂ ನಿಜನೆನಿಪ್ಪ ಪೆರ್ಗಡೆ, ನೆಗಳ್ತೆಯ ಸಂಭ್ರಮೋನ್ನತದ ಜನಪದಂ, ಜಲಶಿಲಾಧಾರಮಹ ಸರ್ವಸಂಗ್ರಹದ ದುರ್ಗಂ, ರನ್ನಹೇಮಾದಿಭಂಡಾರಂ, ಮಹಾವೀರಸೈನ್ಯಂ, ನಿಜಪ್ರಿಯಂ ಕೂಡೆ ಸಪ್ತಾಂಗಸಂಪನ್ನಮೆನಿಸುವ ರಾಜ್ಯಮಕ್ಕುಂ, ಇನಿತಿಲ್ಲದ ರಾಜಂ ದುರ್ಬಲನಕ್ಕುಂ." ಮಂಗಿರಾಜನಿಘಂಟು.

## —ನವಮಾಶ್ವಾಸಂ.—

ಪುಟ ೩೬.—ಪುಟ್ಟು-ಹುಟ್ಟು; ಜನ್ಮವು. ಪಟ್ಟಾದುದೆ-ಸ್ಪಷ್ಟವಾಯಿತೆ? ಅದು ಹೇಗೆ ವಿವರಿಸಿರಿ. ಪಿರಿದೆನೆ-ಪಿರಿದು + ಎನೆ; ದೊಡ್ಡದು ಎಂದು ಹೇಳುವ ಹಾಗೆ, ಸಂಭ್ರಮವಾಗಿ. ದಿಬ್ಬಣ-ವಧೂವರರೊಡನೆ ಬಂಧುಗಳ ಪ್ರಯಾಣ. ಬದ್ದವಣ-ತ್ಸ. ವರ್ಧಮಾನ; ಮಂಗಳವಾದ್ಯ. ಬಿರುಸರಂ-ಬಿರುಸಾದ ಸ್ವರ; ಗಡುಸುಧ್ವನಿ; ಹೆಚ್ಚಾದ ಧ್ವನಿ. ಬೃಂಹಿತ-ಆನೆಯ ಗರ್ಜನೆ. ಮೊಳಗು-ಗುಡುಗು. ಮಾರ್ದನಿಗುಟ್ಟಿದುದು-ಪ್ರತಿಧ್ವನಿ ಕೊಟ್ಟಿತು. ಬಿರುಸರಂ··ಮಾರ್ದನಿಗುಟ್ಟಿದುದು-ವಾದ್ಯಗಳ ಧ್ವನಿಗಳು ಸಮುದ್ರದಲ್ಲಿ ಅಲೆಗಳ ಆರ್ಭಟವೋ ಎಂಬಂತೆಯೂ, ಎಂಟುದಿಕ್ಕುಗಳಲ್ಲಿಯೂ ಆಯಾ ದಿಕ್ಕುಗಳಲ್ಲಿರುವ ಗಜಗಳ ಗರ್ಜನೆಯೋ ಎಂಬಂತೆಯೂ, ಆಕಾಶದಲ್ಲಿ ಗುಡುಗುಗಳ ಧ್ವನಿಯೋ ಎಂಬಂತೆಯೂ ಪ್ರತಿಧ್ವನಿಯನ್ನು ಹುಟ್ಟಿಸಿದುವು. ಆರ್ಚೀಕ-ಋಚೀಕಋಷಿಯ ಪುತ್ರ. ಬಿಲ್ಗಣೆಗಳ್-ಬಿಲ್ಲುಬಾಣಗಳು. ಕೊಡಲಿಯುವ-ಪರಶುರಾಮ. ಕಾಣ್ಬುದು-ಇಲ್ಲಿ ತೋರಿಸು. ದಿಮ್ಮಿದರ್-ದೊಡ್ಡವರು; ಇಲ್ಲಿ ಬ್ರಾಹ್ಮಣರು. ಪೊಣರ್ಕೆ-ಯುದ್ಧ. ಸಾಲ್ಗುಂ-ಸಾಕು. ಕೋಯಂಡ-ತ್ಸ. ಕೋದಂಡ; ಬಿಲ್ಲು.

ಪುಟ ೩೭.—ಕೊಪ್ಪು-ಧನುಸ್ಸಿನ ತುದಿ, ಅಗ್ರ. ಕಡೆಗಾಲದ ಸಿಡಿಲ್ದನಿಗೆತ್ತು-ಪ್ರಳಯಕಾಲದ ಸಿಡಿಲುಗಳ ಧ್ವನಿಯೆಂದು ಭ್ರಮಿಸಿ. ಆಕರ್ಣಾಂತಂ-ಕಿವಿಯವರೆಗೆ. ನಸುಮುನಿಸು—ಏಕೆ ಹುಟ್ಟಿತು? ರಾಜನ್ಯರ್-ರಾಜರ ಸಮೂಹ; ಕ್ಷತ್ರಿಯರು. ದ್ವಾದಶಾದಿತ್ಯರು-ಮಿತ್ರ, ಅರ್ಯಮ, ತ್ವಷ್ಟೃ, ಧಾತೃ, ವರುಣ, ಇಂದ್ರ, ವಿವಸ್ವಾನ್, ವಿಷ್ಣು, ಭಗ, ಪೂಷನ್, ಪರ್ಜನ್ಯ, ಅಂಶುಮಾನ್ ಎಂಬ ಹನ್ನೆರಡುಸೂರ್ಯರುಗಳು. ಏಕಾದಶರುದ್ರರು-ಶಿವ, ಶಂಭು, ಗಿರೀಶ, ರುದ್ರ, ಪಿನಾಕಿ, ಸ್ಥಾಣು, ಸದಾಶಿವ, ಕಪಾಲಿ, ಹರ, ಭರ್ಗ, ಈಶ್ವರ ಎಂಬ ಹನ್ನೊಂದು ರುದ್ರರು. ದಶಯೋಗಿಣಿಯರು-ಕೌಮೋದಕಿ, ವಜ್ರಿಣಿ, ಪದ್ಮಿನಿ, ಪರಮೇಶ್ವರಿ,

ಮಾಹೇಶ್ವರಿ, ವೈಷ್ಣವಿ, ಖಡ್ಗಿನಿ, ಪಾಶುಧಾರಿಣಿ, ದಂಡಿನಿ, ಧ್ವಜಸ್ತ್ರಾ ಎಂಬ ಹತ್ತುಯೋಗಿನಿಯರು. ನವಗ್ರಹಗಳು-ಸೂರ್ಯ, ಚಂದ್ರ, ಮಂಗಳ, ಬುಧ, ಬೃಹಸ್ಪತಿ, ಶುಕ್ರ, ಶನಿ, ರಾಹು, ಕೇತುಗಳು. ಅಷ್ಟವಸುಗಳು-ವರುಣ, ಋಷಭ, ವಿಷ್ಣು, ಪ್ರತ್ಯೂಷ, ನಹುಷ, ಅನಲ, ಪ್ರಭಾಸ, ಜಯಂತರು. ಸಪ್ತಶರಧಿಗಳು-ಲವಣ, ಇಕ್ಷು, ಸುರಾ, ಸರ್ಪಿ, ದಧಿ, ಕ್ಷೀರ ಶುದ್ಧೋದಕಗಳೆಂಬ ಏಳುಸಮುದ್ರಗಳು. ಷಟ್ಶಾಸ್ತ್ರಗಳು-ತರ್ಕ, ವೇದಾಂತ, ಮೀಮಾಂಸ, ವ್ಯಾಕರಣ, ಜ್ಯೋತಿಷ, ಧರ್ಮಶಾಸ್ತ್ರಗಳು. ಪಂಚತತ್ವಗಳು-ಪೃಥಿವ್ಯಪ್ತೇಜೋವಾಯ್ವಾಕಾಶಗಳು. ಚತುರ್ವೇದಗಳು—ಋಗ್ಯಜುಸ್ಸಾಮಾಥರ್ವಣಗಳು. ತ್ರಿಮೂರ್ತಿಗಳು—ಬ್ರಹ್ಮ, ವಿಷ್ಣು, ರುದ್ರರುಗಳು. ದ್ವಿಜಾತಿಗಳು-ಬ್ರಹ್ಮ, ಕ್ಷತ್ರಿಯ, ವೈಶ್ಯರು. ಕಾಣ್ಬನ್ನೆಗಂ-ಕಾಣುವಲ್ಲಿ. ನೋಟ್ಪಿದಂ—ಈ ಪದವು ಇಲ್ಲಿ ಅನವಶ್ಯಕವಾಗಿದೆ, ತಪ್ಪಾಗಿ ಬಿದ್ದಿರಬಹುದು.

೩೭ನೆ ಪುಟದ ಕೊನೆಯಲ್ಲಿ ಆರುಪಙ್ತಿಗಳು ಸಮಂಜಸವಾಗಿಲ್ಲ. ಸಂಸ್ಕೃತಮೂಲಕೋಶದಲ್ಲಿ—ಶ್ರೀ ರಾಮನು ಬಿಟ್ಟ ಬಾಣವು ಭಾರ್ಗವನನ್ನು ವಿಹ್ವಲನನ್ನಾಗಿ ಮಾಡಿ ಅವನ ತೇಜಸ್ಸನ್ನಪಹರಿಸಿ ಶ್ರೀ ರಾಮನನ್ನೇ ಸೇರಿತು. ಆ ಭಾರ್ಗವ ರಾಮನು ಮೂರ್ಛೆ ಹೋಗಿದ್ದು, ಬಳಿಕ ಸ್ವಲ್ಪ ಚೈತನ್ಯ ಹೊಂದಿ ಶ್ರೀರಾಮನಿಗೆ ನಮಸ್ಕರಿಸಿ ಅಪ್ಪಣೆವಡೆದು ತಿರಿಗಿ ಮಹೇಂದ್ರ ಪರ್ವತಕ್ಕೆ ಹೋದನು. ಅಲ್ಲಿ ಭೀತನಾಗಿ ಹಮ್ಮಳಿದವನಾಗಿ ವಾಸಮಾಡುತ್ತಿದ್ದನು. ಈ ಪ್ರಕಾರ ಒಂದುವರ್ಷಕಾಲ ನಿಸ್ತೇಜಸ್ಕನಾಗಿರಲು ಅವನ ತಂದೆಯು ಬಂದು ಅವನ ಸ್ಥಿತಿಯನ್ನು ನೋಡಿ-"ಎಲೈ ಪುತ್ರನೆ, ನೀನು ಹೀಗಿರುವುದು ಸರಿಯಲ್ಲ. ಶ್ರೀರಾಮನು ಪೂಜ್ಯನು, ಮಾನ್ಯನು. ವಧೂಸರವೆಂಬ ಮಡುವಿನಿಂದ ಅಲಂಕೃತವಾದ ಪುಣ್ಯನದಿಯನ್ನು ಸೇರಿ ಅಲ್ಲಿ ಸ್ನಾನಮಾಡುತ್ತಿದ್ದು ನಿನ್ನ ಪೂರ್ವದ ಶರೀರವನ್ನು ಹೊಂದುವನಾಗು. ನಿನ್ನ ಪ್ರಪಿತಾಮಹನಾದ ಭೃಗುವು ದೇವಯುಗದಲ್ಲಿ 'ದೀಪ್ತೋದ' ವೆಂಬ ತೀರ್ಥದಬಳಿ ತಪಸ್ಸುಮಾಡಿ

ದನು. ನೀನೂ ಹಾಗೆಯೇ ಮಾಡು " ಎನ್ನಲು, ಭೃಗುರಾಮನು ತಂದೆಯ ಮಾತಿನಂತೆ ಅಲ್ಲಿಗೆ ಹೋಗಿ ವಿಷ್ಣುವನ್ನು ಕುರಿತು ತಪಸ್ಸು ಮಾಡಿ, ತಿರಿಗಿ ತನ್ನ ತೇಜಸ್ಸನ್ನು ಸಂಪಾದಿಸಿದನು ಎಂದಿದೆ.

## —ದಶಮಾಶ್ವಾಸಂ.—

ಪುಟ ೩೮.—ಈರೇಬ್ಗ್ಳಂ-ಹದಿನಾಲ್ಕುವರ್ಷಗಳು. ಎಲೆವನೆ-ಲತಾಗೃಹ. ತಿಱಿತಂದು-ತಿರಿದುಕೊಂಡುಬಂದು; ಕೊಯ್ದುಕೊಂಡು ಬಂದು.

ಪುಟ ೩೯.—ಕವರ್ತೆ-ಕವರುವಿಕೆ; ಚೌರ್ಯ. ಮೋನ-ತ್ಸ. ಮೌನ. ಪಱು-ಕಾಡು. ಕಣೆ-ತ್ಸ. ಘುಸಿ; ಗಣಿ. ಕಂಡು-ಇಲ್ಲಿ ನೋಡಿ; ಹುಡುಕಿ; ಇದು ತಪ್ಪಾದ ಪ್ರಯೋಗ. ಎಣ್ಣದೆ-ಯೋಚಿಸದೆ; ವಿಚಾರ ಮಾಡದೆ. ಕಣ್ಬುಳುಂಕೆ-ಕಣ್ಣಿನ ಪುಳುಕೆ, ಮಲ. ಏವರ್-ಏನುಮಾಡು ವರು ?

ಪುಟ ೪೦.—ತಿರುಕುಳಿ-ತಿರಿಯುವುದೇ ಸ್ವಭಾವವಾಗಿ ಉಳ್ಳ, ತಿರಿಕೆಯವನು. ಅಮರ್ದುಣಿಗಳ್-ದೇವತೆಗಳು; ಹೇಗೆ? ಸಿರಿವಚ್ಚ ಲಚ್ಚಣ-ತ್ಸ. ಶ್ರೀವತ್ಸಲಾಂಛನ. ಇಂಬಾಗೆ-ಒಪ್ಪಿರಲು. ಬಲ್ವಗೆ-ದೃಢ ಮನಸ್ಸು; ಈ ಪದವನ್ನು ಬಲುವಗೆ ಎಂದರೆ ಅನೇಕರೀತಿ ಎಂಬ ಅರ್ಥ ದಲ್ಲಿ ಭ್ರಮಿಸಿ ಗ್ರಂಥಕಾರನು ಉಪಯೋಗಿಸಿದ್ದಾನೆ.

## —ಏಕಾದಶಾಶ್ವಾಸಂ.—

ಪುಟ ೪೧,—ಮಾನುಷಮಾತ್ರನಾಗಿ-ದೇವನಾಗಿದ್ದರೂ ಕೇವಲ ಮನುಷ್ಯನ ಹಾಗೆ. ಬಂತಿದೇರ-ಪಂಜ್ತಿರಥ; ದಶರಥನು. ಎಂತಾನುಂ-ಎಂತು + ಆನುಂ (ಪ್ರತ್ಯಯ), ಹೇಗಾದರೂ. ದಿಟ್ಟಿಗೊಟ್ಟಿದನಿಲ್ಲಂ-

ದೃಷ್ಟಿಗೆ ಬೀಳಲಿಲ್ಲ. ಕೆಳೆಯರನು-ಗೆಳೆಯರನ್ನಾಗಿ; ಸ್ನೇಹಿತರನ್ನಾಗಿ. ಅಣುವ-ತ್ನ. ಹನುಮಾರ್; ಹನುಮಂತ. ವಿಶ್ವರೂಪ··ನಂತೆಯೆ-ಈ ವಿಶ್ವರೂಪವನ್ನು ಹೇಗೆ ತಿಳಿದೆನೋ ಹಾಗೆಯೇ ಇದನ್ನು ನಿಜವೆಂದು. ಇರವಂ-ಇರುವಿಕೆಯನ್ನು, ಸ್ಥಿತಿಯನ್ನು; ಯಾರು, ಏತಕ್ಕೆ ಬಂದರು ಎಂಬುದನ್ನು. ಪಾಸಿತ್ತು-ಹಾಸಿಗೆಯನ್ನು ಇತ್ತು; ಪಾಸು-ಹಾಸಿಗೆ; ಹೀಗೆ ಧಾತುವನ್ನು ನಾಮಪದವಾಗಿ ಉಪಯೋಗಿಸುವುದಕ್ಕೆ ಎರಡು ಉದಾಹರಣೆಗಳನ್ನು ಕೊಡಿ. ಒಳ್ನೆರವು-ಒಳ್ಳೆಯ ಸಹಾಯ.

ಪುಟ ೪೨.—ಲೀಲಾಮಾತ್ರಮೆನೆ—ಲೀಲಾಮಾತ್ರಂ + ಎನೆ-- ಕೇವಲ ಲೀಲೆ ಎನ್ನುವಹಾಗೆ; ಒಂದು ಆಟವಾಡಿದಹಾಗೆ. ಕಾಲನೆಡೆ ಗಟ್ಟಿ-ಯಮನಸ್ಥಾನಕ್ಕೆ ಓಡಿಸಿ; ಕೊಂದು. ಪಿಂ-ಪಿಂದು, ಹಿಂದಕ್ಕೆ. ಅಣಿಗೆಯ್ದು-ಸಿದ್ಧಮಾಡಿ. ನೆರೆಯಿಪಿದಂ-ಧಾತುವೇನು? ನೆರೆ, ನೆಱೆ ಎಂಬ ಧಾತುಗಳ ಅರ್ಥಭೇದವೇನು? ಅರೆಚಣಂ-ಅರ್ಧಕ್ಷಣದಲ್ಲಿ. ಬಿಡುಗಣ್ಣರ್-ಬಿಟ್ಟಕಣ್ಣುಳ್ಳವರು, ದೇವತೆಗಳು. ಅರಲ್ಮಳೆ-ಪುಷ್ಪವೃಷ್ಟಿ. ತಳ್ಕೈಸುತ-ತಕ್ಕೈಸುತ್ತ, ಅಪ್ಪಿಕೊಂಡು. ಎಡೆಗೊಂಡು-ಎಡೆಗೆಕೊಂಡು; ಸೇರಿಸಿಕೊಂಡು. ಕಟ್ಟಂ ಕಟ್ಟಿ-ಸೇತುವನ್ನು ಕಟ್ಟಿ. ಪೂದೇರ್-ಪುಷ್ಪಕ ವಿಮಾನ; ಇಲ್ಲಿ ತೇರ್ ಎಂಬುದು ದಾಟಿಸುವ ಸಾಧನವೆಂಬ ಅರ್ಥದಲ್ಲಿ ಉಪಯೋಗಿಸಿದೆ. ಪಟ್ಟವಣೆಯೇರ್ದು-ಸಿಂಹಾಸನವನ್ನು ಹತ್ತಿ; ಏರ್ದು-ಏರಿ; ಷಟ್ಪದಿಯ ಕನ್ನಡದಲ್ಲಿ ಉಕಾರಾಂತವಾದ ಧಾತುವನ್ನು 'ರ್'' ಕಾರಾಂತ ಧಾತುವನ್ನಾಗಿ ಮಾಡುವುದುಂಟು; ಪ್ರ. ತೋರ್ದು, ತೋಱು; ಬೆದರ್ದು, ಬೆದಱು.

ಪುಟ ೪೩.—-ದೇವದುಂದುಭಿ-ದೇವತೆಗಳ ನಗಾರಿಯು. ಸೂಳಱಿತು-ಸೂಳಿನ್ನು ಅಱಿತು; ವೇಳೆಯನ್ನರಿತು, ಕ್ರಮವಾಗಿ; ನೊಳಗು ಗುಂ-ಶಬ್ದಮಾಡುತ್ತದೆ; ಎಂದರೆ ದೇವತೆಗಳು ತಕ್ಕಸಮಯದಲ್ಲಿ ಸಂತೋಷಸೂಚಕವಾಗಿ ದುಂದುಭಿಗಳನ್ನು ಹೊಡೆಯುತ್ತಿರುವರು.

## —ದ್ವಾದಶಾಶ್ವಾಸಂ—

ಪುಟ ೪೩.—ಮೇಲೆಸಗು-ಮೇಲ್ಮೆಯನ್ನು ಶ್ರೇಯಸ್ಸನ್ನು ಉಂಟುಮಾಡು. ನೆರಂ-ನೆರವು; ಸೇರುವಿಕೆಯುಂಟು. ಬಲ್ಗೈಯ-ಬಲಿಷ್ಠ. ಮಾಱಾಂತರ್-ಪ್ರತಿಭಟಿಸಿದವರು; ಎದುರುಬಿದ್ದವರು.

ಪುಟ ೪೪.—ಬನ್ನ-ಕಷ್ಟ. ಬೆಂಡಾದಂ-ಬೆಂಡಿನಂತೆ ನಿಸ್ಸಾರವಾಗಿ ಹೋದನು. ಎಣಿಕೆಯಿಲ್ಲದೆ-ಇಲ್ಲಿ ಲಕ್ಷ್ಯಮಾಡದೆ; ಗಣಿಸದೆ. ನಾಣ್ನುಡಿ-ನಾಡಿನ + ನುಡಿ; ಸಾಮಾನ್ಯಜನಗಳ ನುಡಿ ಎಂದರೆ ತಿಳಿಯದವರ ಮಾತು. ಕಕ್ಕಸ-ತ್ಸ. ಕರ್ಕಶ; ಕಠಿನ; ಕ್ರೂರ. ಪೆರ್ಗಳನಲ್ತು-ಪೆರ್ಕಳಶಬ್ದಕ್ಕೆ ಸಾಮಾನ್ಯವಾಗಿ ಹೆಚ್ಚು ಎಂಬ ಅರ್ಥವಿರುವುದರಿಂದ ಹೆಚ್ಚಿನವನಲ್ಲ; ಮಹಾಬಲಿಷ್ಠನಲ್ಲ ಎಂಬ ಅರ್ಥ ಮಾಡಬಹುದು; ಅಥವಾ ಪಿರಿಯಂ ಕಳಂ (—ತ್ಸ. ಖಳ, ನೀಚ) ಅಲ್ತು—ದೊಡ್ಡದುಷ್ಟನಲ್ಲ; ಇವನಿಗಿಂತ ದೊಡ್ಡದುಷ್ಟನು ಬೇರೊಬ್ಬನಿದ್ದಾನೆ ಎಂದೂ ಅರ್ಥ ಮಾಡಬಹುದು. ಎನುತಾಡಲ್-ಇಲ್ಲಿ ಆಡು ಧಾತುವಿಗೆ ಅರ್ಥವೇನು ? ಬಾಮ-ತ್ಸ. ವಾಮ; ಎಡಗಡೆ. ಬಾಮದಿಂ ಬಾಗಿ-ಎಡಗಡೆಗೆ ಬಗ್ಗಿ. ಮನದನ್ನ-ಮನದ + ಅನ್ನ; ಮನಸ್ಸಿಗೆ ಇಷ್ಟನಾದವನು; ಪತಿ. ಸಲಿಗೆ-ಧಾರಾಳವಾಗಿ ಹೋಗಿಬರುವಿಕೆ; ಮತ್ತೊಂದರ್ಥವೇನು ?

ಪುಟ ೪೫.—ಎರಡುಮೂಗರ್ಗಲಂ-ಎರಡು ಮೂರು ವರ್ಷಗಳು. ಒನರ್ಗಳ್-ಒಂದುದಿವಸ. ಪೊಲ್ತುಱೆ-(ಹಳಗನ್ನಡ) ಪೊಲ್ತುಡೆ; (ಹೊಸಗನ್ನಡ) ಹೊತ್ತಾರೆ. ಉಪ್ಪವಡಿಸಿ-ಎದ್ದು. ಕಾಲ್ಯ-ಬೆಳಗ್ಗೆ ಮಾಡಬೇಕಾದ ಕರ್ಮಗಳು; ಸ್ನಾನಸಂಧ್ಯಾವಂದನಾದಿಗಳು. ಪಯಿಂಛಾಸಿರ-ಹತ್ತು ಸಾವಿರ; ಹತ್ತು ಎಂಬುದಕ್ಕೆ ಪಯಿಛ್ ಎಂಬಾದೇಶವಾಗಿದೆ. ಪುಷ್ಕರ-ಕಮಲ. ದ್ವೀಪವರ್ಷ-ಇಲ್ಲಿ ವರ್ಷಶಬ್ದಕ್ಕೆ ಖಂಡ; ಭೂಭಾಗವೆಂದರ್ಥ; ಪ್ರ. ಭಾರತವರ್ಷ, ಕಿಂಪುರುಷವರ್ಷ ಇತ್ಯಾದಿ. ಕೊಡುಗೂಸು-ಕೊಡುವ ಕೂಸು; ಕನ್ಯಕೆ. ದಿನಂ ಪೋಗಲ್-ಇಲ್ಲಿ ದಿನಂ ಎಂದರೆ ಕೆಲವುಕಾಲ.

ಪದಿಮೊಗದವಂ-ಯಾರು ? ಪತ್ತು ಎಂಬುದಕ್ಕೆ ಪದಿ ಎಂದಾದೇಶವಾಗಿದೆ. ಮಱೆನುಡಿ-ಅದೃಶ್ಯವಾಕ್ಯ; ಆಕಾಶವಾಣಿ. ಐಗಳ-ಐದು ಗಳ-(ಕತ್ತು) ಉಳ್ಳವನು; ಪಂಚಶಿರ; ಈಶ್ವರನು. ಪೊನ್ನೊಡೆಯ-ಧನೇಶ್ವರ; ಕುಬೇರ. ಎಳವರೆಯ-ಎಳದು+ಪರೆಯ; ಚಿಕ್ಕವಯಸ್ಸು; ಪರೆಯ-ತ್ಸ. ಪ್ರಾಯ. ಬೀಡಾಗೆಕೊಂಡು-ಮನೆಮಾಡಿಕೊಂಡು.

ಪುಟ ೪೭.—ಕೌಂಗು-ತ್ಸ. ಕ್ರಮುಕ; ಅಡಿಕೆಯಮರ. ಪನೆಮರ-ಓಲೆಯಮರ. ಮೇಲಪ್ಪ-ಇಲ್ಲಿ ಮುಂತಾದ; ಈ ಅರ್ಥ ಸರಿಯೆ ? ತೋಱ್ದೆಡೆ-ತೋಱಿದ ಎಡೆ. ಪಾೞ್ನೆಲಂ-ಪಾಳಾದ ನೆಲಂ; ಪಾಳುಭೂಮಿ; ವ್ಯವಸಾಯವಿಲ್ಲದ್ದು; ಪೈರುಪಚ್ಚೆಯಿಲ್ಲದ್ದು. ಕಿೞ್ನೆಲಂ-ಕೆಳಗು + ನೆಲಂ-ನೀಚವಾದ ಭೂಮಿ; ವ್ಯವಸಾಯಕ್ಕೆ ಬಾರದ ಭೂಮಿ ಎಂದು ಅರ್ಥಮಾಡಬೇಕು. ಪಾೞ್ನೆಲಂ ಕಿೞ್ನೆಲಂ-ವ್ಯವಸಾಯಕ್ಕೆ ಬಾರದ ಊಷರಭೂಮಿಯೇ ಪಾಳುಬಿದ್ದಿರುವ ಭೂಮಿ ಎಂದು ತಾತ್ಪರ್ಯಮಾಡಬೇಕು. ನೆಲೆವನೆಗಳಂ· · ·ನಪ್ಪಂ-ಅಷ್ಟು ಎತ್ತರವಾಗಿದ್ದುವೆಂದು ತಾತ್ಪರ್ಯ. ಸಾಗುವರ್-ಹೇಳಿದ ಕೆಲಸಗಳನ್ನು ಸಾಗಿಸುವರು, ಮಾಡುವರು; ಅಥವಾ ಹರಿಕಾರರಾಗಿರುವರು ಎಂದರ್ಥ ಮಾಡಬೇಕು. ಅಮರ್ದುಣಿ, ಬಂಡುಣಿ-ಅರ್ಥವೇನು ? ರೋಮಾಂಚಂ ಪುಟ್ಟುಗುಂ-ಮೈಯಲ್ಲಿ ಕೂದಲು ಏಳುವಷ್ಟು ಹೆದರಿಕೆಯಾಗುತ್ತದೆ. ಎಂತಿವರ ಪುಟ್ಟೊ· · ·ಶಿವಶಿವಾ-ಇದು ಯಾವ ಅಲಂಕಾರ ? ಗಡುದಾಂಟಿ-ಗಡುವಂ ದಾಂಟಿ; ಹೇಳಿದಷ್ಟು ಕಾಲ ಕಳೆದಮೇಲೆ.

## —ತ್ರಯೋದಶಾಶ್ವಾಸಂ.—

ಪುಟ ೪೭.—ತಗುಳ್ದಿರ್ಕುಂ-ಸೇರಿಕೊಂಡಿದೆ. ಬಯಲ್ನುಡಿ—ವ್ಯರ್ಥವಾದ ಮಾತು; ತಮಾಷಿಮಾತು. ಪಾರ್ವಂ-(ಹೊಸಗ-ಹಾರುವ; ಬ್ರಾಹ್ಮಣ; ಹೇಗೆ ಈ ಅರ್ಥಬಂದಿದೆ ?

ಎಣಿಸಲ್-ಯೋಚಿಸಲು. ಚುರ್ಚಿ-ಮನಸ್ಸಿಗೆ ನಾಟುವಂತೆ. ಕಾಣ್ಬೆಂ-ಇಲ್ಲಿ ಯಾವ ಅರ್ಥ? ಗಂಡುಗಪಿಗಳು-ವೀರರಾದ ಕಪಿಗಳು.

ಪುಟ ೪೮.—ಮೆಯ್ವೆರ್ಚೆ-ಮೆಯ್ಯುಬ್ಬಲು; ಇಲ್ಲಿ ಉತ್ಸಾಹದಿಂದ ಕೂಡಿ. ಪಡೆವಳರುಂ-ಸೇನಾಪತಿಗಳು ; ಇಲ್ಲಿರುವ ಪ್ರತ್ಯಯದ ಅರ್ಥ ವೇನು ? ತಡೆದುದಿಲ್ಲಂ-ಸಾವಕಾಶಮಾಡಲಿಲ್ಲ. ಮನಮಿರ್ದ-ಬರಲು ಇಷ್ಟಪಟ್ಟ. ನಾಡೆಲ್ಲಂ··ಕಂಡು ಕಾಣದಂತಾಯ್ತು-ತಾತ್ಪರ್ಯವೇನು? ಮಿಾನ್ಗಳ್-ನಕ್ಷತ್ರಗಳು; ಮತ್ತೊಂದು ಅರ್ಥವೇನು? ಅಡಿ-ಇಲ್ಲ ಅದಿ; ಕಾರಣ. ಆರೆಂದು··ಲ್ಲಂ-ಅವರು ಯಾರೋ ಗೊತ್ತುಹತ್ತಲಿಲ್ಲ. ಆನೆ-ನಾನೇ. ದೆಸೆ··ದೂಱಗಕೆ-ಅಷ್ಟದಿಕ್ಪಾಲಕರನ್ನೇ ದೊಡ್ಡದೊಡ್ಡ ಕೆಲ ಸಕ್ಕೆ ಆಳುಗಳನ್ನಾಗಿ ಇಟ್ಟುಕೊಂಡಿರುವೆನು. ಬಿದಿಯನುಮಂ-ಬ್ರಹ್ಮ ನನ್ನೂ. ಬಿದುವನುಮಂ-ವಿಷ್ಣುವನ್ನೂ. ಬಿದು-ತ್ಸ. ವಿಧು, ವಿಷ್ಣು; ಅರ್ಥಾಂತರ ಚಂದ್ರ. ಬಿದಿಯನುಮಂ—ಈ ರೂಪವು ಅಶುದ್ಧವೆಂದು ತೋರುತ್ತದೆ. ಬಿದಿ+ಅಂ+ಉಂ=ಷಟ್ಪದಿಯ ವ್ಯಾಕರಣದ ಪ್ರಕಾರ ಬಿದಿಯನುಂ ಎಂದೂ, ಹಳಗನ್ನಡದ ವ್ಯಾಕರಣದ ಪ್ರಕಾರ ಬಿದಿ+ ಉಂ+ಅಂ=ಬಿದಿಯುಮಂ (ಶ. ದ. 122) ಎಂದೂ ಆಗಬೇಕು. ಇದ ರಂತೆ 'ಬಿದುವನುಮಂ' ಎಂಬುದನ್ನು ಅಶುದ್ಧವೆಂದು ತೋರಿಸಿರಿ. ಪಾಸಟಿ ಗೆಯ್ವ-ತನಗೆ ಸದೃಶರನ್ನಾಗಿ ಮಾಡುವವನು. ಮುಪ್ಪೊೞಲುರಿಕ-ಈಶ್ವರ; ಹೇಗೆ? ಮುಪ್ಪೊೞಲೆ-ಮೂರು ಲೋಕವೇ; ಪೊೞಲ್ ಎಂಬುದಕ್ಕೆ ಪಟ್ಟ ಣವೆಂಬುದು ಸರಿಯಾದ ಅರ್ಥ; ಇಲ್ಲಿ ಪ್ರಾಸಿಗೋಸ್ಕರ ಲೋಕವೆಂಬ ಅರ್ಥದಲ್ಲಿ ಉಪಯೋಗಿಸಿದ್ದಾನೆ.

ಪುಟ ೪೯.—ಕಡಲೇೞುಂ-೩೭ ನೆಯ ಪುಟದ ಟಿಪ್ಪಣಿಯನ್ನು ನೋಡಿರಿ. ದೀವಿಯಿದಂ-ವ್ಯಾಕರಣವಿಶೇಷವೇನು? ಬಗ್ಗ-ತ್ಸ. ವ್ಯಾಘ್ರ, ಹುಲಿ. ಪೊಣರಲ್—ಜಗಳಮಾಡಲು. ದ್ವೀಪಾಟನ—ದ್ವೀಪಗಳಲ್ಲಿ ··ೞಿದರೊ—ಕೂಗಿಕೊಂಡರೊ; 'ಚೀಱು' ಎಂಬುದಕ್ಕೆ ··ದುವುಗಳ ಧ್ವನಿ ಇವುಗಳಲ್ಲಿಯೇ ಹೆಚ್ಚಾಗಿ

ಉಪಯೋಗವಿದೆ. ಮನದಿಟ್ಟ-ಮನಸ್ಸಿಗೆ ನಿಶ್ಚಯ; ದಿಟ್ಟ-ತ್ಸ. ದಾರ್ಢ್ಯ. ವೇಡಿಕೆ-ವಿನೋದ; ತಮಾಷೆ; ಇದು ತಮಿಳಿನಲ್ಲಿ ರೂಢಿಯಾಗಿದೆ; ಕನ್ನಡದಲ್ಲಿ ಉಪಯೋಗದಲ್ಲಿರುವಂತೆ ಕಾಣುವುದಿಲ್ಲ.

## —ಚತುರ್ದಶಾಶ್ವಾಸಂ.—

ಪುಟ ೪೯.—ಬಂತಿದಲೆಯಂ-ಸಹಸ್ರಕಂಠನು; ಹೇಗೆ? ಚಲ್ಲಣ-ಚಡ್ಡಿ. ಸೂಸಕ-ಗೊಂಚಲು; ಇಲ್ಲಿ ಗೊಂಡೆಗಳು ಕಟ್ಟಿರುವ ನಿಲುವಂಗಿ. ಮಕುಟಗಳ್-ಕಿರೀಟಗಳು. ಪುರಿಗೆಯ್ದು-ಹುರಿಮಾಡಿ; ಮೀಸೆಯ ತುದಿಯನ್ನು ನಿಗುರಿಸಿ. ನಱುದಂಬುಲ-ನಱು-(ವಾಸನೆಯುಳ್ಳ) ತಂಬುಲ-(ತಾಂಬೂಲ); ಕರ್ಪೂರತಾಂಬೂಲ. ಸಾಯಕ-ಬಾಣ; ಇಲ್ಲಿ ಆಯುಧ.

ಪುಟ ೫೦.—ಪಡಿಬಲ-ಪ್ರತಿಬಲ; ಸಹಾಯಸೈನ್ಯ. ಪಱಿಮೂಗು-ಪಱಿದಮೂಗು; ತುದಿ ಕತ್ತರಿಸಿಹೋದಹಾಗೆ ಚಪ್ಪಟೆಯಾಗಿರುವ ಮೂಗು. ನಿಡುಗಣ್-ನಿಡಿದು (ಉದ್ದವಾದ) + ಕಣ್. ಪೆಡದಲೆ-ಹಿಂದಕ್ಕಿರುವ ತಲೆ. ಬಿಡುದಲೆ-ಮುಂದಕ್ಕಿರುವ ತಲೆ. ಕಾಣ್ಬುದರಿದ್ದೈ-ನೋಡುವುದಕ್ಕಾಗುವುದಿಲ್ಲ; ಎಂದರೆ ಹೆದ್ದರಿಕೆಯಾಗುತ್ತದೆ. ಏರ್ಪಟ್ಟ-ಸಿದ್ಧವಾದ. ಪಗೆ-ಶತ್ರು, ಶತ್ರುತ್ವ ಎಂಬ ಎರಡು ಅರ್ಥದಲ್ಲಿಯೂ ಬರುತ್ತದೆ.

ಪುಟ ೫೧.—ಪಿಂತೆಣ್ಣಿದುದು-ಹಿಂದೆ ನೆನೆಸಿದುದು, ಯೋಚನೆ ಮಾಡಿದುದು. ಬಿಲ್ಗಣೆಗಳು-ಬಿಲ್ಲೂ ಬಾಣಗಳೂ. ಸುರಗಿ-ತ್ಸ. ಛುರಿಕಾ; ಕತ್ತಿ. ಅಡ್ಡಣ-ಗುರಾಣಿ. ಬೆಂಗಡೆ-ಬೆನ್ನಿನ ಕಡೆ. ತಾಂಗೆ-ತಾಗಲು; ಎದುರಿಸಲು. ಪೊಯ್ಯಲು—ಹೊಡೆಯಲು; ಅಪ್ಪಳಿಸಲು. ಮರಱ್ದು-ತಿರುಗಿ. ಆದಱನೆ-(ಆದಱಂ + ಎ) ಆದರಿಂದಲೇ. ಸೋಲ-ಸೋಲು; ಪರಾಜಯ. ನುಗ್ಗುನುಱಂಕಾಯ್ತು-ಚೂರುಚೂರಾಯಿತು; ಇಲ್ಲದೆ ಹೋಯಿತು. ಕೋಲ್ಗಳ-ಬಾಣಗಳ. ಶರನಿಧಿ-ಇಲ್ಲಿ ಶರಗಳ, ಬಾಣಗಳ, ನಿಧಿ-ಬೊಕ್ಕಸ; ಶರ ಎಂಬುದರ ನಾನಾರ್ಥವೇನು?

ಇರ್ತಂಡ-(ಎರಡು + ತಂಡ); ಉಭಯಸೇನೆ. ಮಯಂ-ರಾಕ್ಷಸರ ಶಿಲ್ಪಿಯು. ಈತಂಗಳ-ಇವರುಗಳ. ಸಂಸರ್ಗಮಂ-ಸಂಬಂಧವನ್ನು; ಸಹವಾಸವನ್ನು. ಒಲ್ಲೆನೆನುತ-ಒಪ್ಪುವುದಿಲ್ಲವೆಂದು ಹೇಳಿ. ತನ್ನವರ್ಗಾಗುತೆ-ತನ್ನ ಕಡೆಯವರಾದ ರಾಕ್ಷಸರಿಗೋಸ್ಕರ. ತನ್ನವರ್ಗಾಗುಗುತೆ...ಬಿಟ್ಟಿರಂ. ಅಷ್ಟೊಂದು ಕಲ್ಲೂಮರಗಳೂ ಬಿದ್ದಿದ್ದುವು. ಒಟ್ಟಿರ್ಪುದಂ-ರಾಸಿಯಾಗಿ ಬಿದ್ದಿರುವುದನ್ನು; ರಾಶಿಯನ್ನು; (ಪುಟ ೩೪. 4. 'ಕೆನ್ನೀರನೊಟ್ಟಿಸಿ' ಎಂಬುರೊಡನೆ ಹೋಲಿಸಿ.) ಕಟ್ಟಚ್ಚರಿ-ಕಡಿದು + ಅಚ್ಚರಿ; ಅತ್ಯಾಶ್ಚರ್ಯ; ಅತ್ಯಾಶ್ಚರ್ಯ ಏತಕ್ಕೆ ? ತುತ್ತತುದಿ-ತುದಿ + ತುದಿ; ಇದರಂತೆ ಮೊತ್ತಮೊದಲ್.

ಪುಟ ೫೨.—ಸಮದಂಡಿಯ-ಸಮತೂಕದ; ಹೆಚ್ಚುಕಡಮೆಯಿಲ್ಲದ; ಈ ಅರ್ಥವು ಹೇಗೆ ಬಂದಿದೆ ? ಗೆಲ್ಲ-ಜಯ. ಕವಡುಬಿಜ್ಜೆ-ಕಪಟವಿದ್ಯೆ; ಮಾಯಾವಿದ್ಯೆ. ಸಾರಂ-ಪ್ರಯೋಜನ. ಪೊಯ್‌ಕಯ್-ಯುದ್ಧ. ಕಾಯುತಿರ್ದರ್-ಇಲ್ಲಿ ನಿರೀಕ್ಷಿಸುತ್ತಿದ್ದರು. ಕಸಿಕಿಸಿ-ಸ್ಪರ್ಧೆ. ಅಸಾಧ್ಯವಾಯ್ತು-ಯಾವುದು ? ಲಂಕೆ-ವಿಭೀಷಣನ ಸೇನೆಯು. ಪುಷ್ಕರಕೆ-ಸಹಸ್ರಕಂಠನ ಸೇನೆಗೆ; ಈ ಅರ್ಥ ಹೇಗೆ ಬಂತು? ತಬ್ಬಲಿಗಳ್-ಅಪ್ರಯೋಜಕರು; ಪ್ರ. ತಬ್ಬಲಿಮಾತು, ತಬ್ಬಲಿಕೆಲಸ, ತಬ್ಬಲಿಶರೀರ; ಇದು 'ತರುವಲಿ'-(ತಾಯ್ತಂದೆಗಳು ಗೊತ್ತಿಲ್ಲದ ಕನ್ಯೆ) ಎಂಬುದರ ರೂಪಾಂತರವಾಗಿರಬಹುದು; ಪ್ರಾಚೀನಕಾವ್ಯಗಳಲ್ಲಿ ಈ ಅರ್ಥದಲ್ಲಿ ಪ್ರಯೋಗಿಸಿಲ್ಲ. ಕಿನಿಸಿಂ-ಕೋಪದಿಂದ. ದೊಣೆ-ನಿಷಂಗ; ಬತ್ತಳಿಕೆ. ಪಂದೆಗಳ...ರೆಡೆಯೊಳ್-ಹೇಡಿಗಳು ಹಿಂದುಸರಿಯುವರು ಎಂದು ತಾತ್ಪರ್ಯ; ಉತ್ತರನ ಕಥೆಯನ್ನು ಸ್ಮರಿಸುತ್ತದೆ. ಅಂದಂದಿಗುಂ-ಆಗಾಗ್ಯೆ. ಬೆಂಗೊಟ್ಟರ್-ಇಲ್ಲಿ ಹಿಂದಿರುಗಿ ಓಡಿದರು ಎಂಬ ಅರ್ಥದಲ್ಲಿ ಉಪಯೋಗಿಸಿದೆ. ಕಾಲ್ಗೆ ಬುದ್ಧಿಯೊರೆದರ್-ಓಡಿಹೋದರು. ಆಜಿಗೆ-ಯುದ್ಧಕ್ಕೆ. ದಿಟ್ಟತನದ-ಧೃಷ್ಟತನದ. ಕಟ್ಟುಹಿಡಿದುಂ-ಕಟ್ಟನ್ನು ಹಿಡಿದುಂ, ಎಂದರೆ ಎಷ್ಟು ಧೈರ್ಯವನ್ನು ತಂದುಕೊಂಡರೂ. ಕೈದು-ಆಯುಧ. ಬರ್ಪನಿತಱೊಳ್-

ಬರುವುದರೊಳಗೆ. ಮಱಿವಟ್ಟು-ಸ್ತಬ್ಧರಾಗಿ. ಬೆರಂಟುತಿರ್ದರ್-ಅಂಗುಷ್ಟದಿಂದ ಬಗಿಯುತ್ತಿದ್ದರು. ಆಳ್ತನದ ಬಿರುದಿಂಗೆ-ಶೂರರೆಂದು ಪ್ರಸಿದ್ಧರಾಗಿದ್ದುದಕ್ಕೋಸ್ಕರ.

ಪುಟ ೫೩.—ಕಟ್ಟಕಡೆ = ಕಡೆ + ಕಡೆ, ಕೊನೆಗೆ. ಆಕೆವಾಳರ್-ಪರಾಕ್ರಮಶಾಲಿಗಳು. ಮಲೆನಾಡಿಗರ = ಪರ್ವತಪ್ರಾಂತ್ಯದವರ; ಇಲ್ಲಿ ಕೋತಿಗಳ. ಬೂಸಣ-ತ್ಸ. ಭೂಷಣ, ಅಲಂಕಾರ. ಆಳ್ತನ-ಆಳಿನತನ, ಶೌರ್ಯ, ಪರಾಕ್ರಮ. ಅಡಿಯೆೞ್ದು-ಅಡಿಯಿಂ ಎದ್ದು ನಿಂತು, ಇಲ್ಲಿ ಪ್ರತಿಭಟಿಸಿ. ಮಡುಹಿರ್ಪರ್-ಕೊಂದಿರುವರು. ಬೊಬ್ಬಿರಿವರ್-ಘರ್ಜಿಸುವರು. ಟುಗುರ್ಗುಟ್ಟುತೆ-ಕರಡಿಗಳಂತೆಯೂ, ಟಗರುಗಳಂತೆಯೂ ಟುರ್ರೆಂದು ಶಬ್ದಮಾಡುತ್ತ. ಬಾಯ್ಗಳೆದು-ಬಾಯನ್ನು ಬಿಟ್ಟುಕೊಂಡು; 'ಕಳೆ' ಎಂಬ ಧಾತುವಿಗೆ ಈ ಅರ್ಥದಲ್ಲಿ ಪ್ರಯೋಗವು ಸಾಧಾರಣವಾಗಿಲ್ಲ. ಮಾರ್ಮಲೆತುದು-ಎದುರುಬಿದ್ದಿತು; ಧಾ. ಮಾರ್ಮಲೆ. ಅಡ್ಡವಡೆ-ಅಡ್ಡಲಾಗಿ ಬಂದಸೇನೆ, ಪ್ರತಿಭಟಿಸಿದ ಸೇನೆ. ನಿದ್ದೆಗೊಂಡುದು-ಇಲ್ಲಿ ದೀರ್ಘನಿದ್ರೆಗೊಂಡದು, ಸತ್ತರು. ಉಡುಗಿ-ಮೈಯೆಲ್ಲಾ ನೋಯುವಂತೆ ಕಷ್ಟಪಟ್ಟುಕೊಂಡು, ಧಾ. ಉಡುಗು-ಸಂಭನ್ನೇ. ಬರ್ದಿಲರಪಡೆ-ದೇವತೆಗಳ ಸೈನ್ಯ; ಇಲ್ಲಿ ಪಡೆ ಎಂಬುದು ಸಮೂಹಾರ್ಥದಲ್ಲಿ ಉಪಯೋಗಿಸಿದೆ; ಇಲ್ಲಿ ಸೈನ್ಯವೆಂದು ಅರ್ಥಮಾಡಲು ಸಂದರ್ಭವಿರೋಧ. ಮೋನಮಿರ್ದುದು-ಆಶ್ಚರ್ಯದಿಂದ ಮೌನವಾಗಿದ್ದರು, ಎಂದರೆ ಬೆರಗಾಗಿ ಹೋದರು.

---

## —ಪಂಚದಶಾಶ್ವಾಸಂ.—

---

ಪುಟ ೫೪.—ಗಾಯದೆಕ್ಕಲನಂತೆ—ಗಾಯಹೊಂದಿದ ಕಾಡಹಂದಿಯಂತೆ, ಮಹಾರೋಷದಿಂದ. ಕೋಪಂತಣ್ಣಗಾದುದು-ಕೋಪವು ಶಾಂತಿಯಾಯಿತು : ಶಾಂತವಾದುದು ಏತಕ್ಕೆ ? ಪುೞುವಾನಸರ್-

ಹುಳುವಿನಂತಿರುವ ಮನುಷ್ಯರು, ತಿಕ್ಕಿದರೆ ನುಸಿಯಂತೆ ಸಾಯುವಷ್ಟು ಬಲಹೀನರಾದ ಮನುಷ್ಯರು, ಇನ್ನೆಗಂ-ಈವರೆಗೂ. ನರಗುಱಿ-ಕುರಿಗಳ ಹಾಗೆ ಹೇಡಿಗಳಾದ ಮನುಷ್ಯರು. ಗಂಡಂ-ಸಮರ್ಥನು, ಇಲ್ಲಿ ಸ್ವಾಮಿ. ಜಸಕೆ ಕಸಂ-'ಬರ್ಪುದು' ಎಂದು ಅಧ್ಯಾಹಾರ. ಏವೆಂ-ಏಗುವೆಂ, ಏನುಮಾಡಲಿ ? ಮುಃಯ್ಯಾಂತು-ಪ್ರತಿಯಾಗಿ ನಿಂತು ಯುದ್ಧಮಾಡಲು. ಉಸಿಕನೆ-(ಅವ್ಯಯ) ಸುಮ್ಮನೆ. ನಿಷಂಗ-ಬತ್ತಳಿಕೆ. ಶರಾಸನ-ಬಿಲ್ಲು.

ಪುಟ ೫೫.—ದಿಮ್ಮಿದರಪ್ಪ-ಪೌಢರಾದ; ಇಲ್ಲಿ ದೊಡ್ಡವರಾದ. ಅಸದಳ-ಅಸಾಧ್ಯ. 'ಕೋದಂಡಂ' ಎಂಬ ಶಬ್ದವು ಎರಡು ಅರ್ಥಗಳಲ್ಲಿ ಉಪಯೋಗಿಸಿದೆ; ಅದಕ್ಕೆ ಒಂದರ್ಥ ಧನುಸ್ಸು; ಮತ್ತೊಂದರ್ಥ ಕೋದಂಡಂ = ಕ (ಬ್ರಹ್ಮನ) + ಉತ್ (ಶ್ರೇಷ್ಠವಾದ) + ಅಂಡಂ = ಬ್ರಹ್ಮಾಂಡ. ನಿಲಿಂಪರ್-ದೇವತೆಗಳು. ಜವ ಶಬ್ದಕ್ಕೆ ಯಮ, ವೇಗ ಎಂದು ಎರಡು ಅರ್ಥವಿದೆ. ಜವಂಗೆಡಿಸುವೆಂ-ಜವದಿಂಕೆಡಸುವೆಂ, ಇಲ್ಲಿ ಸಾಮರ್ಥ್ಯವನ್ನು ನಾಶಮಾಡುವೆನು. ಪುಜ್ಚವಣಂ-ಪರೀಕ್ಷೆ; ಪುಜ್ಚವಣಂ ಗೆಯ್ಯುತ-ಪರೀಕ್ಷೆನೋಡುತ್ತ. ಮೂಂಕರಿಸುತೆ-ಹಾಸ್ಯ ಮಾಡುತ್ತ. ನಿರ್ನೆರಂ-ಸುಮ್ಮನೆ, ವ್ಯರ್ಥವಾಗಿ. ಆನೆ-ಆನೆಯು, ನಾನೇ ಕಪಿತ್ಥ-ಬೇಲದಹಣ್ಣು.

ಪುಟ ೫೬.—ಅಱರಕ್ಕಸ-ಕ್ಷುದ್ರರಾಕ್ಷಸ, ನೀಚರಾಕ್ಷಸ. ಕೂರ್ಗಣೆ = ಕೂರಿತು + ಕಣೆ, ಹರಿತವಾದಬಾಣ. ಎಚ್ಚಂ-ಪ್ರಯೋಗಿಸಿದನು; ಧಾ. ಇಸು. ತಡವೆ-ಸಲ; ಇದು ತಮಿಳಿನಮಾತು. ಮಂತ್ರಿಸಿದ ಕೋಲ್ಗಳ್-ಅಸ್ತ್ರಗಳು. ಅಚ್ಚಯಗೊಲ್ಗಳ್-ಅಕ್ಷಯವಾದ ಬಾಣಗಳು; ಅಚ್ಚಯ-ತ್ಸ. ಅಕ್ಷಯ. ಪೊಗರುಗುವ-ಇಲ್ಲಿ ಜ್ವಾಲೆಗಳನ್ನು ಬಿಡುತ್ತಿರುವ; ಪೊಗರ್ ಎಂಬುದಕ್ಕೆ ಸಾಧಾರಣವಾಗಿ ಕಾಂತಿ ಎಂಬುದೇ ಅರ್ಥ. ತಮ್ಮಾಸನ-ತಮ್ಮ + ಆಸನ, ಬತ್ತಳಿಕೆ. ಗದ್ದುಗೆ-ಪೀಠ; ಇಲ್ಲಿ ಬಿಲ್ಲು.

ಪುಟ ೫೭.—ಮೆಯ್ಸೋಲ್ತರ್ = ಮೆಯ್ಯಲ್ಲಿಸೋಲ್ತರು; ಎಂದರೆ ಬಳಲಿಕೆಹೊಂದಿದರು. ಸೇದನೀರ್ = ಸ್ವೇದಜಲ, ಬೆವರುನೀರು.

ಸ್ಪೃಶಿಸಿ- ಮುಟ್ಟಿ. ರಾಮಬಾಣಕೆ ಪುಸಿಯುಂಟೆ-ಎಂದರೆ ತಾತ್ಪರ್ಯವೇನು ? ಮರುಳ್ತನಂ-ಅಜ್ಞಾನವು. ಸಲ್ಲದು-ಯೋಗ್ಯವಲ್ಲ; ಉಚಿತವಲ್ಲ. ನೀವು ದೇವತೆಗಳಾದರೂ, ರಾಮನ ನರನಾಟಕವನ್ನು ತಿಳಿಯದೆ ಹಾಹಾಕಾರ ಮಾಡಿದಿರಲ್ಲಾ ! ಎಂದರೆ, ನೀವು ಮಾಡಬಾರದಾಗಿತ್ತು.

---

## —ಷೋಡಶಾಶ್ವಾಸಂ.—

---

ಮಸಣವಟ್ಟೆ-ಸ್ಮಶಾನಮಾರ್ಗ. ಮರುಳ್ಗಳಿಂ-ಪಿಶಾಚಿಗಳೊಡನೆ. ಕಾಳರಕ್ಕಸ-ಕಪ್ಪಗಿರುವ ರಾಕ್ಷಸ; ಭಯಂಕರನಾದ ರಾಕ್ಷಸ. ಕಣ-ಇಲ್ಲಿ ಯುದ್ಧರಂಗ. ದಿಗ್ಬಂಧನಂಗೆಯ್ವರ್-ದಿಕ್ಕುಗಳನ್ನು ಬಂಧಿಸುವರು, ಎಂದರೆ ನಾಲ್ಕು ಕಡೆಯಿಂದಲೂ ಅವನು ಮೇಲೆ ಬೀಳದಂತೆ ಮಂತ್ರಪುರಶ್ಚರಣೆಯಿಂದ ತಮ್ಮನ್ನು ಕಾಪಾಡಿಕೊಳ್ಳುವರು. ಇರ್ಪುಗುಂದಿದ-ದ್ರವಹೋದ, ನೀರಾರಿದ, ಬಾಡಿಹೋದ.

ಪುಟ ೫೮.—ಕಣ್ಗಡ್ಡಮಾದುದು- ( ಕಣ್ಗೆ + ಅಡ್ಡಮಾದುದು ) ಎಂದರೆ, ಇಲ್ಲಿ ಕಣ್ಗೆಮರೆಯಾದುದು, ಅದೃಶ್ಯವಾಯಿತು; ನಾಶವಾಯಿತು; ‘ ಕಣ್ಗಡ್ಡ ’ ‘ ಕಣ್ಗೆಡ್ಡ ’ ಇವುಗಳಿಗೆ ಅರ್ಥಭೇದವೇನು ? ಕಡೆಗೊಂಡರ್- (ಕಡೆಯಂಕೊಂಡರ್) ಒಂದು ಕಡೆಗಾಗಿ ಹೋದರು. ಹರಿನಾದಂ-ಸಿಂಹನಾದ, ಘರ್ಜನೆ; ಹರಿ-ನಾನಾರ್ಥವೇನು ? ಆದಿಮಾಯೆ, ಆದಿಶಕ್ತಿ, ವಿಶ್ವರೂಪಿಣಿ-ಈ ವಿಶೇಷಣಗಳ ಅರ್ಥಗಳಿಗನುಸಾರವಾಗಿ ಏನೇನು ಕೆಲಸಗಳನ್ನು ಮಾಡಿಕೊಡುವಂತೆ ಋಷಿಗಳು ದೇವಿಯಲ್ಲಿ ಪ್ರಾರ್ಥನೆ ಮಾಡುತ್ತಾರೆ ? ಕೂಂದಲ್-ಕೂದಲು. ಸುಲಿಪಲ್=ಸುಲಿದ (ತೊಳೆದ) + ಪಲ್, ಶುಭ್ರವಾದ ಹಲ್ಲು. ತಳಿರ್ನಾಲಿಗೆ-ತಳಿರಂತಪ್ಪನಾಲಿಗೆ; ತೆಳ್ಳಗೆ

ಕೆಂಪಗಿರುವ ನಾಲಗೆ. ಕರಾಳಮುಖಿ-ಭಯಂಕರವಾದ ಮುಖವುಳ್ಳವಳು. ರುಂಡಮಾಲೆ-ತಲೆಬುರುಡೆಗಳ ಮಾಲೆ. ಎಲ್ವುದೊಡವು-ಎಲ್ವುಗಳ ತೊಡವು; ಮೂಳೆಗಳಿಂದ ಮಾಡಲ್ಪಟ್ಟ ಆಭರಣಗಳು. ಮಾಕಾಳಿ-ಮಹಾಕಾಳಿ. ಸೀತೆಯೊಡನೆಯೆ-ಸೀತೆಯು + ಒಡನೆಯೆ. ತಿರೆಗೆ ಧಿಮ್ಮಿಕ್ಕುತೆ-ಪುಷ್ಪಕದಿಂದ ರಣಭೂಮಿಗೆ ಧುಮಿಕಿ. ಕಣ್ಬಾಪೆ-ಕಣ್ಣಿನ ಪಾಪೆ, ಕಣ್ಣಿನೊಳಗೆ ಇರುವ ಬೊಂಬೆ, ಇಲ್ಲಿ ಗುಡ್ಡೆ.

ಪುಟ ೫೯—ಮೊನೆ-ಯುದ್ಧ. ಪೊಡೆ-ಹೊಟ್ಟೆ. ತೋರದಂಡೆ-ದಪ್ಪವಾದ ಹಾರ; ತೋರ-ತ್ಸ. ಸ್ಥೂಲ. ಪರಿಜು-ವೇಷ; ಪಡಿವರಿಜಿನ-ಪ್ರತಿವೇಷದ; ಇಲ್ಲಿಸಮಾನಾಕಾರವುಳ್ಳ. ಮಾತೃಕೆಯರ್-ಪ್ರಭಾವತಿ, ವಿಶಾಲಾಕ್ಷಿ ಮೊದಲಾದ ಅವಳ ರೋಮಕೂಪದಿಂದ ಉತ್ಪನ್ನರಾದ ಮಾತೃಕೆಯರು. ಓಕುಳಿಯಾಟಂ-ರಕ್ತದಿಂದ ವಸಂತೋತ್ಸವ. ಸೆಂಡಾಟಂ-ಚೆಂಡಾಟ. ಸೊಗಯಿಸುತಿರ್ದರ್-ಸುಖಪಡುತ್ತಿದ್ದರು. ಅಡಿಯಉದು-ಅಡಿ ನಾಶವಾಗಿ, ಸಂಪೂರ್ಣನಾಶವಾಗಿ. ಮಾಂಸಾಶಿಗಳ್-ಮಾಂಸವನ್ನು ತಿನ್ನುವ ರಾಕ್ಷಸರು.

ಪುಟ ೬೦—ಪೆಡಂಮೆಟ್ಟ-ಹಿಮ್ಮೆಟ್ಟಿ ಹೋಗಿ, ಅಡಗಿಹೋಗಲು. ಬಾವನ್ನದ ಅಣ್ಪು-ಚಂದನದ ಲೇಪನ.

ಪುಟ ೬೧—ಉಪೇಂದ್ರಂ-ವಿಷ್ಣುವು; ಇಂದ್ರನಿಗೆ ತಮ್ಮನಾಗಿ ವಾಮನನಾಗಿ ಹುಟ್ಟಿದುದರಿಂದ ಆ ಹೆಸರು ವಿಷ್ಣುವಿಗೆ ಬಂದಿದೆ. ಸೇರೆಗೆಯ್ಯುತ್ತಿ-ಅಂಜಲಿಮಾಡಿ, ಕೈಮುಗಿದುಕೊಂಡು. ಗುಹ್ಯಮಂತ್ರ-ರಹಸ್ಯವಾದ ಮಂತ್ರ. ಏರೂಪಿಂ-ಯಾವ ರೂಪದಿಂದ. ನೀಲಲೋಹಿತ ರೂಪ-ನೀಲ ಮತ್ತು ಕೆಂಪು ಇವುಗಳ ಬೆರಕೆಬಣ್ಣವುಳ್ಳ ಆಕಾರ.

ಪುಟ ೬೨—ಲೋಗರ್ಗ್...ಬಟ್ಟೆಗೆಯ್ದು-ಎಂದರೆ ಅರ್ಥವೇನು ? ಮೆಯ್ಗೊಂಡು-ಶರೀರವನ್ನು ಧರಿಸಿ, ಅವತಾರಮಾಡಿ. ನೇಸಱಬಆ-

ಸೂರ್ಯನ ವಂಶ. ವಾಗ್ವಿದಂ-ಮಾತುಬಲ್ಲವನು; ವಾಗ್ಮಿ. ಸ್ತೈಪು-ಪುಣ್ಯ, ಇಲ್ಲಿ ಸಂಪತ್ತು.

ಕೊನೆಯ ಗದ್ಯದಲ್ಲಿ ಕವಿಯು ತಾನು ಯಾರೆಂಬುದನ್ನು ಹೇಳಿಕೊಳ್ಳುತ್ತಾನೆ. ತಿರುಳ್ಗನ್ನಡಿಗನ-ಆದಿಪಂಪನು ತನ್ನ ಭಾಷೆಯನ್ನು ತಿರುಳ್ಗನ್ನಡವೆಂದು ಹೇಳಿಕೊಂಡಿರುವುದರಿಂದ, ಆದಿಪಂಪನ ಎಂದರ್ಥವಿರಬಹುದು. ಅಡಿದಾವರೆಯ ಬಂಡುಣಿಗಳ್-ಪಾದಪದ್ಮದ ಭ್ರಮರಗಳು; ಎಂದರೆ ಹೇಗೆ ಭ್ರಮರಗಳು ಪದ್ಮದಲ್ಲಿರುವ ಮಕರಂದಪಾನದಲ್ಲಿ ಸದಾ ಆಸಕ್ತಗಳಾಗಿವೆಯೋ, ಹಾಗೆಯೇ ಮಹಾಕವಿಗಳ ಕಾವ್ಯರಸಪಾನದಲ್ಲಿ ಆಸಕ್ತರಾದ; ಕನ್ನಡಗಬ್ಬಿಗರ-ಕನ್ನಡಭಾಷೆಯ ಕವಿಗಳ. ಮನೆಯೂಳಿಗದವನು-ಗೃಹದಾಸನು, ಬಡದಾಸನು, ಎಂದರೆ ಅವರ ಮನೆಗಳಲ್ಲಿ ಇದ್ದುಕೊಂಡು ಅವರ ಅಭಿಪ್ರಾಯಗಳನ್ನು ಎಲ್ಲೋ ಅಲ್ಪಸ್ವಲ್ಪ ತಿಳಿದಿರುವವನು ಎಂದು ತಾತ್ಪರ್ಯ. ಈ ಕೊನೆಯ ವಾಕ್ಯದಲ್ಲಿ ಕವಿಯು ಕಾಳಿದಾಸನು

ಮಂದಃಕವಿಯಶಃಪ್ರಾರ್ಥೀ ಗಮಿಷ್ಯಾಮ್ಯುಪಹಾಸ್ಯತಾಂ |
ಪ್ರಾಂಶುಲಭ್ಯೇಫಲೇಲೋಭಾದುದ್ಬಾಹುರಿವವಾಮನಃ ||

ಎಂದು ಹೇಳಿಕೊಳ್ಳುವ ಹಾಗೆ ಕನ್ನಡಿಗರಲ್ಲಿ ತಾನೂ ಒಬ್ಬ ಸಾಮಾನ್ಯನೆಂದು ತನ್ನ ನೈಚ್ಯವನ್ನು ಹೇಳಿಕೊಳ್ಳುವ ಭಾವ.—

# ಅದ್ಭುತ ರಾಮಾಯಣದ ಶೋಧನ ಪತ್ರಿಕೆ

| ಪುಟ. | ಪಙ್ಕ್ತಿ | ಶೋಧಿತಭಾಗ |
|---|---|---|
| ೧ | ೪ | ಪಿಡಿದ |
| ೧ | ೧೧ | ಸಂದಿಗ್ಧಾರ್ಥ |
| ೧ | ೧೩ | ಪೆಱತೊಂದೆಡೆ |
| ೨ | ೬ | ರಾಮಾಯಣಂ |
| ೩ | ೭ | ಪೇೞ್ವಿರ್ |
| ೫ | ೨೪ | ವಳಕ್ಷ |
| ೮ | ೭ | ಪೆರ್ಮೆವಡೆದೀತನ |
| ೯ | ೫ | ಕುಶಲ |
| ೯ | ೧೭ | ಪೊಱವಾಡುಂ |
| ೧೧ | ೩ | ಅಂತಕ್ಕೆ |
| ೧೧ | ೧೬ | ತಳರ್ದು |
| ೧೪ | ೧೮ | ಸಮನಂತರ |
| ೧೪ | ೨೧ | ಸೀನೆ |
| ೧೫ | ೬ | ಆದಱಿನಿರ್ವರ್ಗ |
| ೧೫ | ೧೭ | ವೇೞ್ಕು |
| ೨೧ | ೨ | ಯಶಸ್ವಿ |
| ೨೧ | ೧೨ | ಮೆಱೆ |
| ೨೨ | ೧೯ | ಮೆಯ್ಯೊಳೇಂ |
| ೨೩ | ೧೧ | ಪೊರ್ದುಗೆ |
| ೨೩ | ೧೯ | ಇದರ್ಕೆ |
| ೨೪ | ೧೮ | ಬರವಾದುದು |
| ೨೫ | ೨೦ | ಅಪಹರಿಸಿ |
| ೨೬ | ೨೨ | ಬರೆಯೆ...ತೊರೆಯೆ |
| ೨೮ | ೧೦ | ಸ್ವರಭೇದಂ |
| ೨೯ | ೮ | ಪೊಡವಿ |
| ೨೯ | ೨೫ | ವಸುದೇವ |
| ೩೦ | ೧೪ | ತುಂಬುರಸಂ |
| ೩೫ | ೧೪ | ಪೇೞುಗೆ |
| ೩೭ | ೯ | ದರ್ಪಿಷ್ಟಂ |
| ೩೭ | ೧೬ | ಷಟ್ಛಾಸ್ತ್ರಂ |
| ೩೭ | ೨೧ | ನೋೞ್ಪುದುಂ |
| ೩೮ | ೨೧ | ಬಿತ್ತರಿಪಂ |
| ೪೦ | ೧೬ | ಸನ್ನುತಿ |
| ೪೨ | ೨೫ | ಪೊರೆ |
| ೪೩ | ೭ | ಮುಂತಪ್ಪ |
| ೪೪ | ೧೪ | ಕೈಪಿಡಿವುದರ್ಕೆ |
| ೪೪ | ೧೫ | ಜನಕನಪ್ಪ ಅಂತಾಯೆಡೆ |
| ೪೪ | ೨೪ | ಅವನೊಳೆನಗೆ |
| ೫೧ | ೨೦ | ಸಂಸರ್ಗಮನೊಲ್ಲೆ |
| ೫೩ | ೧೪ | ಬರ್ಪರಿದಿರೊಳ್ |
| ೫೫ | ೧೬ | ಬೆದಱಲವಕಾಶ |
| ೫೭ | ೮ | ಮೊರ್ತಡವೆಯೆ |
| ೫೮ | ೯ | ಪೆಱತೊಂದೆಡೆ |
| ೫೯ | ೨೦ | ಪೊಗೞ್ವರನಾರಯ |
| ೬೧ | ೧೬ | ಮಾನಸೋತ್ತರ |

—: ಟಿಪ್ಪಣಿ :—

| | | |
|---|---|---|
| 12 | 16 | ಕೈಯ ಅನ್ನ |
| 12 | 19 | ಹೊಸಗನ್ನಡ |
| 14 | 10 | ಆಜ್ಞಾದಂಡ |
| 16 | 4 | ಇರವುಮಂ |
| 19 | 5 | ಎರ್ದೆಗೊಂಡರಿಲ್ಲಂ |
| 24 | 9 | ಕಣಿ-ತ್ಸ-ಖನಿ |
| 31 | 14 | ನಿದ್ರೆಗೊರಗುದು |
| 32 | 1 | ತಿಕ್ಕಿದರೆ |
| 32 | 7 | ಪ್ರೌಢರಾದ |